# ಹಾಸನ್ ಟೋಪಿ

## ಅಥವಾ ಹಳೇ ಮೆಟ್ರಿಕ್



ಲೇಖಕ:—ಎಚ್ ವಿ ಎಸ್.



ಮುದ್ರಣ:—"ಸರಸ್ವತೀ ಪ್ರಿಂಟಿಂಗ್ ವರ್ಕ್ಸ್ ಲಿಮಿಟೆಡ್"
ಮಂಗಳೂರು, ದ. ಕನ್ನಡ.





ುವ ಸ್ಥಳ:—

ಬಾಲ ಸಾಹಿತ್ಯ ಮಂಡಲ, ಲಿಮಿಟೆಡ್,
ಮಂಗಳೂರು.

ಬೆಲೆ 0—8—0

# ಅನುಕ್ರಮಣಿಕೆ

# ಮೊದಲನೆಯ ಅಧ್ಯಾಯ.

## ಒಂದೂರು.

ಇದು ಒಂದು ಊರು. ಆ ಊರ ಹೆಸರು ಯಾವುದಾದರೇನು? ಅದು ಒಂದು ಊರು, - ಒಂದೂರು. ಒಂದೂರಲ್ಲಿ ಎಲ್ಲ ಊರುಗಳಲ್ಲಿರು ವಂತೆಯೇ, ಪಟೇಲರು, ಶ್ಯಾನುಭೋಗರು ಇದ್ದಾರೆ. ಪೋಸ್ಟ್ ಮೇಸ್ಟ ರರು ಇದ್ದಾರೆ. ಅಂಗಡಿ, ಮಳಿಗೆ, ಮಂಡ್ಯಗಳು ಇವೆ. ದೇವಸ್ಥಾನವಿದೆ. ಛತ್ರವಿದೆ. ಪ್ರಯಾಣಿಕರ ಬಂಗಲೆ ಇದೆ. ಬ್ರಾಹ್ಮಣರದೊಂದು ಹಾಳುಬಿದ್ದ ಅಗ್ರಹಾರವೂ, ಆ ಅಗ್ರಹಾರಕ್ಕೊಂದು ಸಣ್ಣ ಕೇರಿಯೂ ಇದೆ. ಇಲ್ಲಿ ಕುರಿಚಲು, ಅಲ್ಲಿ ಹಾಡಿ, ಮುಂದೆ ದಿನ್ನೆ, ದಾಟಿದರೆ ಹಳ್ಳ, ಹಳ್ಳದ ಮೇಲೆ ಸಂಕ. ಅಲ್ಲಿಂದ ಕೆಳಗೆ ಹೊಲ, ಬಯಲು, ತೋಟ, ರಿಜರ್ವ್ ಕಾಡಿನ ಗಡಿ ಕಲ್ಲುರಾಶಿ, ಬಳಿಯಲ್ಲಿಯೇ ಹುಲ್ಲುಗಾವಲು, ಅದರಾಚೆ ಸ್ಮಶಾನ, ಒಂದೆ ರಡು ಹಾಳು ಬಾವಿಗಳು; ಹಾಗೆ ಹೋಗುತ್ತಾ ಪಟೇಲರ ಚಾವಡಿ, ಬಿಡಿದನ ಗಳಿಗೊಂದು ದೊಡ್ಡಿ, ಅದರ ನೆರೆಯಲ್ಲಿ ಊರಮಕ್ಕಳಿಗಾಗಿ ಒಂದು ಸಾಲೆ. ಅದರ ಇದಿರಲ್ಲಿ—ಎರಡು ಹೊಲಗಳ ಆಚೆ, ಹೊಲಗೇರಿಯಿಂದೀಚೆ,— ಸೇಂದಿ ಅಂಗಡಿ. ಇಷ್ಟೇ ನಮ್ಮ ಒಂದೂರು.

ಆ ಒಂದೂರ ಸಾಲೆಯ ಚರಿತ್ರೆಯು ಕೇಳತಕ್ಕುದಾಗಿದೆ. ದಶಾವ ತಾರ ಮೇಳದ ಭಾಗವತರೊಬ್ಬರು ನೂರು ವರ್ಷಗಳ ಹಿಂದೆ ಇಲ್ಲಿ ಯಕ್ಷಗಾನ ಪ್ರಸಂಗ, ಜೈಮಿನಿ ಭಾರತ, ರಾಮಾಯಣ, ಭಾರ ತಾದಿಗಳನ್ನು ಓದಿ ಹಾಡಿ ಅರ್ಥ ಹೇಳುವುದರಲ್ಲಿಯೂ, ಹಾಗ ಹಣ ಅಡ್ಡ ವೀಸಗಳ ಲೆಕ್ಕ ಕಲಿಸುವುದರಲ್ಲಿಯೂ ಹೆಸರಾಗಿದ್ದರು. ಕ್ರಮೇಣ, ಅವ ರಿದ್ದ ಮನೆಯೇ ಒಂದು ಐಗಳ ಸಾಲೆಯಾಯಿತು. ಭಾಗವತರಲ್ಲಿ ಕಲಿ ತವರೊಳಗೆ ಒಬ್ಬರು ಈ ಐಗಳ ಸಾಲೆಯ ಗುರುಗಳಾದರು. ಇವ ರಂತೆ, ಇವರ ಅನಂತರ ಶಿಷ್ಯರೊಬ್ಬರು ಈ ಸಾಲೆಯ ಐಗಳರಾದರು.

ಹಾಗೆಯೇ ದಿನ ಕಳೆಯುತ್ತಾ, ಆ ಕಾಲ ದಾಟಿ, ಈ ಕಾಲ ಬಂತು. ಈ ಕಾಲದಲ್ಲಿ ಐಗಳರಿಲ್ಲ ಮೈಗಳ್ಳರೆಂದಾಯಿತು; ಅವರ ಕೋಲುದಂಡೆ ಯಮ ದಂಡವಾಯಿತು; ಗುರುದಕ್ಷಿಣೆ ಅಕ್ಕಿ, ಕಾಯಿಪಲ್ಯ, ದೋತ್ರಗಳಲ್ಲಿ ಯಾಗದೆ, ರೂಪಾಯಿ ಆಣೆ ಪೈಗಳಲ್ಲಾಯಿತು. ಐಗಳರ ಬದಲಾಗಿ, ತರ ಬೇತಾದ ಉಪಾಧ್ಯಾಯರೇ ಬಂದರು. ಸೂರ್ಯನನ್ನು ನೋಡಿ ಇನ್ನು ಶಾಲೆಯ ಪಾಠ ಆರಂಭಿಸುವುದೂ, ಮಕ್ಕಳನ್ನು ಮನೆಗೆ ಕಳುಹುವುದೂ ಮುಗಿದು, ಗಡಿಯಾರ ನೋಡಿಯೇ ಸೂರ್ಯನು ಮೂಡಿ ಮುಳುಗು ವಂತಾಯಿತು. ಅಲ್ಲಿನ ದೊಡ್ಡ ಸಾಹುಕಾರರಲ್ಲೊಬ್ಬರು ಸಾಲೆಗೆಂದು ಒಂದು ಶಾಲೆಯ ಕಟ್ಟೋಣವನ್ನು ಕಟ್ಟಿಸಿ ಕೊಟ್ಟು, ಅದರ ಖರ್ಚಿಗೆಂದು ತಕ್ಕಷ್ಟು ದ್ರವ್ಯಸಾಹಾಯ್ಯವನ್ನೂ ಮಾಡಿದ ಬಳಿಕ ಇಷ್ಟೆಲ್ಲವೂ ಆಯಿತು. ಪರೇಲರು ಚಾವಡಿಯಲ್ಲಿ ಕೆಲಸವಿಲ್ಲದಿರುವಾಗ, ಶಾಲಾ ಸಂದರ್ಶನೆಗೆ ಬಂದು, ಅಲ್ಲೇ ವೀಳೆಯ ಗುದ್ದಿಸಿ ಜಗಿಯುತ್ತಾ ಕುಳ್ಳಿರುವುದಿತ್ತು. ಊರಲ್ಲಿ ಹೊಸಬರಾದರೂ ಬಂದರೆ, ಅವರು ನೋಡಬೇಕು ಈ ಶಾಲೆ ಯನ್ನು! ಅದರ ವಟವಾಸಿನ ಗೋಡೆ, ಸುತ್ತಲಿನ ತೋಟ, ಕಲ್ಲುಕಟ್ಟಿದ ಬಾವಿ! ಎಷ್ಟೆತ್ತರ, ಉದ್ದಗಲ ಶಾಲೆಯ ಕಿಟಿಕಿ ಬಾಗಿಲುಗಳು! ಆ ಊರ ಸಾಹುಕಾರರೊಬ್ಬರು ಮನೆ ಹೊಸದಾಗಿ ಕಟ್ಟಿಸುವಾಗ, ಈ ಶಾಲೆ ಕಟ್ಟಿಸಿ ದವರನ್ನೇ ಕರೆತರಿಸಿ, ಅದಕ್ಕಿಂತಲೂ ಒಂದು ಬಣ್ಣ ಅಂದವಾಗಿ ಕಟ್ಟಿಸಿ ದರು. ಗ್ರಂಥವಾಚನ, ತಾಳಮದ್ದಳೆ, ಸಂಗೀತ, ಮೃದಂಗವಾದನ ಇತ್ಯಾದಿ ಗಳಿಗೆ ಈ ಶಾಲೆಯೇ ರಂಗಸ್ಥಳ, ಸಭಾಗೃಹ. ಸಾಲದುದಕ್ಕೆ ಸೇಕ ದಾರರು (ಮಣೇಗಾರರು) ಇಲ್ಲೇ ಕಚೇರಿಮಾಡುವುದಿತ್ತು; ತಹಶಿಲ್ದಾ ರರು ಸರ್ಕೀಟಿಗೆ ಬಂದಾಗ ಇಲ್ಲಿಯೇ 'ಕೇಂಪ್' ಮಾಡುವುದಿತ್ತು. ಜಮಾಬಂದಿಯೂ ಇಲ್ಲೇ. ಕೌನ್ಸಿಲು ಚುನಾವಣೆಗೂ ಈ ಶಾಲೆಯೇ.

ಇದೇ ಒಂದೂರ ಕನ್ನಡ-ಇಂಗ್ಲೀಷ್ ಲೋವರ್ ಸೆಕಂಡರಿ ಶಾಲೆ. ಎಂಟು ಕ್ಲಾಸುಗಳು; ಆರು ಮಂದಿ ಉಪಾಧ್ಯಾಯರು. ಮೊನ್ನೆ ಇಲ್ಲಿ ವರ್ಷಾವಧಿ 'ಇನ್ಸ್‌ಪೆಕ್‌ಶನ್' ಆಗಿದ್ದಿತು. ದೊಡ್ಡ ಇನ್ಸಪೆಕ್ಟರರು ಇಲ್ಲಿಗೆ

ಮೂರು ವರ್ಷಕ್ಕೊಮ್ಮೆ ಬರುವುದುಂಟು; ಸಣ್ಣ ಇನ್ಸಪೆಕ್ಟರರು ಮೊನ್ನೆಯ ಪರೀಕ್ಷೆಗೆ ಬಂದು, ಮೂರು ದಿನ ಪರೀಕ್ಷೆಮಾಡಿ, ರಿಪೋರ್ಟು ಒರೆದು ಹಿಂತೆರಳಿದರು. ಮಕ್ಕಳಿಗೆಲ್ಲ ಈ ಮೂರು ದಿನದಲ್ಲಿಯೂ ಅಯನಡ ಕಾಲದ ಉಡುಪು, ಸಿಂಗಾರ. ಪರೀಕ್ಷೆಯ ಕೊನೆಯ ದಿನ ರಾತ್ರಿಕಾಲ ದಲ್ಲಿ ತಾಳಮದ್ದಳೆ ಇತ್ತು. 'ಬಬ್ರುವಾಹನ ಕಾಳಗ'ವನ್ನು ಮುಖ್ಯೋ ಪಾಧ್ಯಾಯರೇ ಹಾಡಿದರು; ಮೃದಂಗ ಬಾರಿಸಲು ಡ್ರೋಯಿಂಗ್ ಮಾಸ್ತ ರರು ಒದಗಿದರು. ಮಿಕ್ಕುಳಿದ ಉಪಾಧ್ಯಾಯರೂ, ಪರೇಲ ಶ್ಯಾನುಭೋಗರೂ ಬಹಳವಾಗಿ ಅರ್ಥ ಹೇಳಿದರು. ಲೋ॥ ಸೆಕೆಂಡರಿ ಕ್ಲಾಸಿನ ಮಕ್ಕಳಲ್ಲಿ ಇಬ್ಬರು ಮೊದಲನೆ ಬಬ್ರುವಾಹನ, ವೃಷಕೇತು ಪಾತ್ರಗಳನ್ನು ವಹಿಸಿ ದರು. ದೀಪ ಸರಿಮಾಡಿ ಉರಿಸುವುದೂ, ಶಾಲಾ ವಠಾರದಲ್ಲಿ ಸದ್ದಾಗ ದಂತೆ ನೋಡುವುದೂ, ಆಗಾಗ ವೀಳಯದ ಹರಿವಾಣ ಅತ್ತಿತ್ತ ಒಯ್ಯು ವುದೂ, ಉಗುಳುತಟ್ಟೆ ಹೊರಚೆಲ್ಲಿ ತಂದಿಡುವುದೂ, ಇತ್ಯಾದಿ ಕೆಲಸಗಳ ಸರ್ವಾಧಿಕಾರವನ್ನು ಮಳಿಗೆಯ ಊಳಿಗದ ಇನಾಸನು ವಹಿಸಿದ್ದನು. ಇನ್ಸ್ ಪೆಕ್ಟರ್ ರಾಯರು ಬಹಳ ಸಂತೋಷಗೊಂಡು, ಗ್ರಾಮ ಶಾಲೆಗಳಲ್ಲಿ ಇದ್ದರೆ ಇಂತಹ ಉಪಾಧ್ಯಾಯ ಮಂಡಳಿಯೇ ಇರಬೇಕೆಂದು ಕಂಠೋಕ್ತವಾಗಿ ನುಡಿ ದರು. ವಿದ್ಯಾರ್ಥಿಗಳ ಹಾಗೂ ಉಪಾಧ್ಯಾಯರ ಗೌರವವು, ಅವರ ಸಂಬಳ ಕಡಿಮೆಯಾದರೂ, ಅಂದಿನಿಂದೀಚೆಗೆ ಊರಲ್ಲಿ ಬಹಳ ಹೆಚ್ಚಿದೆ;—ಹಬ್ಬಿದೆ. ಈಗ ಶಾಲೆಗೆ ಹೋಗದೆ ಅತ್ತಿತ್ತ ಅಡ್ಡಾಡುವ ಹುಡುಗರೇ ಸಿಕ್ಕುವುದಿಲ್ಲ. ಹುಡುಗಿಯರೂ ಶಾಲೆಗೆ ಬರುತ್ತಿದ್ದಾರೆ. ಶಾಲಾ ಮಕ್ಕಳ ಸಂಖ್ಯೆ 150ರಷ್ಟಾಗಿದೆ.

'ಊರಲ್ಲಿ ಪಾಠಶಾಲೆಯೆ ಗ್ರಾಮಜೀವನದ ಹೃದಯದಂತಿರಬೇಕು' ಎಂಬ ಮಾತನ್ನು ಈ ಶಾಲೆ ಉದಹರಿಸುತ್ತಿದೆ. ಇದರ ವಿಷಯದಲ್ಲಿ ವಿಶೇಷ ವಿಷಯಗಳನ್ನು ಮುಂದೆ ಓದಲಿಕ್ಕಿರುವೆವು. ನಮಗೀಗ ಈ ಶಾಲೆಯ ವರ್ಧಂತ್ಯುತ್ಸವಕ್ಕೆ ಆಮಂತ್ರಣವು ಬಂದಿದೆ. ಮಿತ್ರರೊಡಗೂಡಿ ಬರಬೇಕೆಂದು ಹೇಳಿಕೆ; ನೀವು ನಮ್ಮ ಮಿತ್ರರು. ಬನ್ನಿ, ನಾವಲ್ಲಿಗೆ ವರ್ಧಂತ್ಯುತ್ಸವ ನೋಡಲು ತೆರಳುವ.

---

# ಎರಡನೆಯ ಅಧ್ಯಾಯ.

## ಶಾಲಾ-ವರ್ಧಂತಿ.

ಇದೇ ಈಗ ಶ್ರೀರಾಮಪುರವೆಂಡಾದ ಆ ಒಂದೂರ ಶಾಲೆಯು ಕಟ್ಟಡ ವನ್ನೆಲ್ಲ ಅಲಂಕರಿಸಿದ್ದಾರೆ. ತಳಿರು ತೋರಣ ಕಟ್ಟದ್ದಾರೆ; ಬಣ್ಣಬಣ್ಣದ ಪತಾಕೆ ನೆಟ್ಟಿದ್ದಾರೆ; ಹೂವಿನ ಬಳ್ಳಿ ನೇತುಹಾಕಿದ್ದಾರೆ; 'Wel-come' 'ಸುಸ್ವಾಗತ'ವೆಂದು 'ಬೋರ್ಡು' ಹಚ್ಚಿದ್ದಾರೆ;—ಇದೆಲ್ಲ ಹುಡುಗರ ಕೆಲಸ. ಹೆಡ್‌ಮೇಸ್ಟರು ಸುಬ್ಬರಾಯರೂ, ಅವರ ಸಹಾಯಕರೂ ಸಭೆಗೆ ಬರುವವ ರನ್ನು ಸ್ವಾಗತ ಮಾಡಲಿಕ್ಕಾಗಿ, ಬಾಗಿಲ ಬಳಿ ಕಾದು ನಿಂತಿದ್ದಾರೆ.

ಹೊತ್ತಿಗೆ ಮೊದಲೇ, ಜನಗಳು ಸೇರುತ್ತಿರುವರು. ತಿಪ್ಪಾ ಜೋಯಿ ಸರು, ಶಾಲು ಹೊದೆದುಕೊಂಡು, ಬಂದರು. ರಾಮಣ್ಣ ಭಟ್ಟರು, ಸೊಂಟಕ್ಕೆ ಧೋತ್ರ ಸುತ್ತಿಕೊಂಡು ಬಂದರು. ಶಾನುಭಾಗ ಸುಬ್ರಾಯರು, ಜುಬ್ಬಾ ಹಾಕಿ, ತಲೆ ಬಿಟ್ಟುಕೊಂಡು ಬಂದರು. ಪಟೇಲ್ ಸಣ್ಣಯ್ಯ ಹೆಗ್ಗಡೆರು, ಜರೀ ಅಂಚಿನ ಪಂಚೆ ಹೊದ್ದು, ಬಿಳೇ ರುಮಾಲು ಸುತ್ತಿ ಕೊಂಡು ಬಂದರು ಪೋಸ್ಟ್ ಮೇಸ್ಟರು, ಕರೀ ಅಂಗೀ ಹಾಕಿ ಹಾಸನ ಟೋಪಿ ಇಟ್ಟು ಬಂದರು. ತಿಮ್ಮಣ್ಣಾಚಾರ್ಯರು,—ಎಲ್ಲಿಗೋ ಊಟಕ್ಕೆ ಹೋದವರು,—ಪಂಚಪಾತ್ರೆ, ಪಟ್ಟೇಮಡಿ, ಓಲೆ ಕೊಡೆ ಹಿಡಿದುಕೊಂಡೇ ಸಭೆಗೆ ನುಗ್ಗಿದರು. ಅಂತೂ, ಸಭೆಯ ಕಾರ್ಯಕ್ರಮ ಆರಂಭವಾಗುವ ಮೊದಲೇ ಸಭೆ ತುಂಬಿ ಹೋಗಿತ್ತು. ನಿಂತು ನೋಡಲಿಕ್ಕೂ ಸ್ಥಳವಿರಲಿಲ್ಲ. ಕಿಟಕಿಗಳ ಚೌಕಟ್ಟಿನಲ್ಲೂ ಕೆಲವರು!

ತಕ್ಕ ಸಮಯದಲ್ಲಿ ಅಧ್ಯಕ್ಷರು ಬಂದರು. ಅವರನ್ನು ಹೆಡ್ ಮೇಸ್ಟರು ಮರ್ಯಾದೆಯಿಂದ ಇದಿರ್ಗೊಂಡು ಕರತಂದು, ಉಚಿತವಾದ ಸ್ಥಾನದಲ್ಲಿ ಕುಳ್ಳಿರಿಸಿದರು. ಒಡನೆಯೇ ಕಾರ್ಯಕ್ರಮದ ಉಪಕ್ರಮ. ಮೂರು ಮಂದಿ ಹೆಣ್ಣುಮಕ್ಕಳು, 'ಸ್ವಾಗತ ಗೀತ' ಹಾಡಿ ಹೋದರು. ಬಳಿಕ ಹೆಡ್‌ಮೇಸ್ಟರು 'ಶಾಲಾವರದಿ'ಯನ್ನು ಅಧ್ಯಕ್ಷರ ಸೂಚನೆಯಂತೆ

ಓದತೊಡಗಿದರು. ವರದಿಯಲ್ಲಿ, 'ಎಂದಿನಂತೆ' ಸಾಲೆಗೆ ಸೇರಿದ ಮತ್ತೂ ಬಿಟ್ಟ ವಿದ್ಯಾರ್ಥಿಗಳ ಸಂಖ್ಯೆ, ವಸೂಲಾದ ಸಂಬಳದ ಸಂಖ್ಯೆ, ಸರಾಸರಿ ಹಾಜರಿ, ಕೆಲಸ ಮಾಡುತ್ತಿರುವ ಉಪಾಧ್ಯಾಯರ ಅಂಕೆ ಮೊದಲಾದುವೆಲ್ಲ ಇದ್ದುವು. 'ಶಾಲೆಗೆ ಹಣ ಸಾಲದು; ಗ್ರಾಂಟಿಗೆ ಅರ್ಜಿ ಹಾಕಿದೆ; ಉತ್ತರ ಬಂದಿಲ್ಲ'ವೆಂದೂ ಅದರಲ್ಲಿ ನಮೂದಿಸಿತ್ತು. 'ಶಾಲೆಯ ಸಾಮಾನ್ಯ ಸ್ಥಿತಿಯು ಸಾಧಾರಣ ಸಮಾಧಾನಕರವಾಗಿದೆ' ಎಂದು ಸಾಕಲ್ಯವಾಗಿ ಡಿಪ್ಯುಟಿ ಇನ್ಸಪೆಕ್ಟರರು ಬರೆದ ರಿಮಾರ್ಕನ್ನೂ ಓದಲಾಯಿತು.

ಇದು ಮುಗಿದ ಅನಂತರ, ಕಾರ್ಯಕ್ರಮದ ಒಂದೊಂದೇ ಭಾಗವು ಜರಗುತ್ತ ಬಂತು. ಅದರಲ್ಲಿ ದೊಡ್ಡದೆಂದರೆ, ಪ್ರಹಸನ;—ಈಗ ಅದರ ಅಭಿನಯವಾಗುತ್ತಿತ್ತು. ಸಭಿಕರೆಲ್ಲರೂ ಆಗಾಗ ಚಪ್ಪಾಳೆ ತಟ್ಟುತ್ತ ತಮ್ಮ ಆನಂದವನ್ನು ತೋರ್ಪಡಿಸುತ್ತಿದ್ದರು.

ಈ ದಿನದ ನಮ್ಮ ಅಧ್ಯಕ್ಷರು, ಒಬ್ಬ 'ಪೋಲೀಸ್ ಇನಸ್ಪೆಕ್ಟರ್!' ಹೆಡ್‌ಮೇಸ್ಟರರು ಈ ಚುನಾವಣೆಯನ್ನು, ಬೇರೆ ಉಪಾಯವಿಲ್ಲದೆ ಮಾಡಿದ್ದರು. ಅವರು ಮೊದಲು ತಾಲೂಕ್ ಬೋರ್ಡ್ ಪ್ರೆಸಿಡೆಂಟರನ್ನು ಕೇಳಿಕೊಂಡರು. ಅವರು ಆಗುವುದಿಲ್ಲವೆಂದರು. ಅನಂತರ ವಿದ್ಯಾಂಗದ ಡಿಪ್ಯುಟಿ ಇನಸ್ಪೆಕ್ಟರರನ್ನು ಪ್ರಾರ್ಥಿಸಿಕೊಂಡದ್ದಕ್ಕೂ 'ಸರ್ಕೀಟ್' ಇದೆ ಎಂದು ಉತ್ತರ ಬಂತು. ಕೊನೆಗೆ ನಮ್ಮ 'ವಕೀಲ್ ದಾಮೋದರ ರಾಯರೇ ಸರಿ' ಎಂದು ನಿನ್ನೆಯ ವರೆಗೆ ನಿರೀಕ್ಷಿಸಿದ್ದಾಯಿತು. ಪರಸ್ಥಳಕ್ಕೆ ಹೋದ ಅವರು ಇನ್ನೂ ಬರಲಿಲ್ಲ. ಇನ್ನೇನು ಮಾಡುವುದು? ಎಂದು ಅವಸರದಲ್ಲಿ ಈ ಅಧ್ಯಕ್ಷರು. ಅವರು ೨ ಊರಿಗೆ ಸರಕಾರಿ ಕೆಲಸದ ಮೇಲೆ ಬಂದವರು.

ಪ್ರಹಸನ ಮುಗಿಯಿತು. ಅಧ್ಯಕ್ಷರ ಸದ್ದಿಲ್ಲ. ಹೆಡ್‌ಮೇಸ್ಟರರು ನೋಡುತ್ತಾರೆ:—'ಒಳ್ಳೇಯ ನಿದ್ರೆ ಅವರಿಗೆ'; ಹೆಡ್‌ಮೇಸ್ಟರರು ಅಧ್ಯಕ್ಷರನ್ನು ಮೈಮುಟ್ಟಿ ಎಬ್ಬಿಸಿದರು.

ಅಧ್ಯಕ್ಷರು ಎಚ್ಚೆತ್ತು 'ನಿನ್ನೆ ರಾತ್ರಿ ಒಂದು ಕಳುವಿನ ಸಂಬಂಧ ನಿದ್ದೆಯೇ ಇದ್ದಿಲ್ಲ'; ಎಂದು ಕಣ್ಣು ತಿಕ್ಕಿಕೊಳ್ಳುತ್ತ 'ಈಗ ಏನಾಯಿತು? ಇನ್ನೇನು ಆಗಬೇಕು?' ಎಂದು ಕೇಳಿದರು. 'ಇನಾಮಿನ ಹಂಚೋಣ' ಎಂದು ಹೆಡ್‌ಮೇಸ್ಟರರು ಹೇಳಿದರು.

ಅದೇ ಪ್ರಕಾರ ಇನಾಮಿನ ಹಂಚೋಣಕ್ಕೆ ಆರಂಭವಾಯಿತು. ಒಬ್ಬ ಉಪಾಧ್ಯಾಯರು ಬಹುಮಾನ ಪಡೆಯತಕ್ಕವರ ಹೆಸರುಗಳನ್ನು ಓದುತ್ತ ಬಂದರು. ಮತ್ತೊಬ್ಬರು ಬಹುಮಾನದ ಪದಾರ್ಥಗಳನ್ನು ಅಧ್ಯಕ್ಷರ ಕೈಗೆ ಒಂದೊಂದಾಗಿ ಕೊಡುತ್ತಿದ್ದರು. ಈ ಮಧ್ಯೆ, ಸಭೆಯಲ್ಲಿ ಸ್ವಲ್ಪ ಗದ್ದಲವಾಯಿತು. ಅದರ ಕಾರಣವು ಇದು:—

ಅಯ್ಯಣ್ಣನವರಿಗೆ ಅಣ್ಣಯ್ಯನೆಂಬ ಮಗ. ಅವನು ಈ ಶಾಲೆಯ ವಿದ್ಯಾರ್ಥಿ; 'ಲೋವರ್ ಸೆಕೆಂಡರಿ'ಯಲ್ಲಿ 'ಪ್ಯಾಸ್' ಆಗಿದ್ದ. ಅವನಿಗೆ ಬಹುಮಾನವೂ ಇತ್ತು. ಅವನ ಹೆಸರು ಕರೆದ ಕೂಡಲೇ, ಅಯ್ಯಣ್ಣನವರು, ಜನರ ಗುಂಪಿನಲ್ಲಿ ಹೊರಗೆ ನಿಂತವರು, ಒಳಗೆ ನುಗ್ಗಿದರು; ಮಗನಿಗೆ ಆಗುವ ಬಹುಮಾನವೇನೆಂದು ನೋಡಲಿಕ್ಕೆ. ನುಗ್ಗುವಾಗ, ಅವರ ಎಲೆವಸ್ತ್ರ ಜಾರಿ ಕೆಳಗೆ ಬಿತ್ತು. ಅದನ್ನು ಯಾರೋ ಕಾಣದೆ ತುಳಿದು ಬಿಟ್ಟರು. ಅಯ್ಯಣ್ಣನವರು ರೇಗಿ, ಯಾರಿಗೋ ಎರಡು ಮಾತಾಡಿದರು. ಅವರೂ ಕಣ್ಣಿಗೆ ಕೈ ತುರುಕಿ ಉತ್ತರ ಹೇಳಿದರು. ಇಷ್ಟರಲ್ಲಿ ಸಮೀಪದಲ್ಲಿದ್ದವರು ರಾಜಿಮಾಡಿಸಲು ಆತುರಪಟ್ಟರು. ಅದೇ ಈ ಗುಲ್ಲು.

ಅಧ್ಯಕ್ಷರು ಈ ಸಮಯದಲ್ಲಿ ಹೇಗೆ ವರ್ತಿಸಬೇಕಿತ್ತೋ ತಿಳಿಯದು; ಅಂತೂ ಅವರೇನೋ 'ಸಾಯಲೆನ್ಸ್' (ಮೌನವಾಗಿರಿ) ಎಂದು, ಅವರ ಕವಾತಿನ ಕ್ರಮದಂತೆ, ಅಪ್ಪಣೆ ಮಾಡಿಬಿಟ್ಟರು. ಅದರಲ್ಲಿ 'ಸಾಯ್' ಎಂಬುದು ಮಾತ್ರ ಕೇಳಿಸಿತು. ಅಯ್ಯಣ್ಣನವರು, ತಿರುಗಿ, ನೋಡಿ, ಕೋಪದಿಂದ, 'ಸಾಯ್! ಯಾರು ಸಾಯಬೇಕು? ಏಕೆ ಸಾಯಬೇಕು' ಎಂದು ಗಟ್ಟಿಯಾಗಿ ಕೇಳಿದರು.

ಹೆಡ್‌ಮೇಸ್ಟರರು ಓಡಿಬಂದರು. 'ನಮಸ್ಕಾರ! ಅಯ್ಯಣ್ಣನವರೆ! ಹೀಗೆ ಬನ್ನಿ' ಎಂದು ಅವರ ಕೈ ಹಿಡಿದು ಕರೆತಂದರು. ಅಲ್ಲಿ ನೋಡಿದರೆ, ಕುರ್ಚಿಗಳು ಎಲ್ಲಿವೆ? ಯಾರೋ ಒಬ್ಬ ವಿದ್ಯಾರ್ಥಿ ಒಂದು ಕುರ್ಚಿಯ ಮೇಲೆ ಸುಖವಾಗಿ ಕುಳಿತಿದ್ದ. ಅವನನ್ನು ಎಬ್ಬಿಸಿ ಅಯ್ಯಣ್ಣನವರನ್ನು ಕುಳ್ಳಿರಿಸಿದ್ದಾಯಿತು. ಅಣ್ಣಯ್ಯನವರಿಗೆ ಹೋದ ಮರ್ಯಾದೆ ಈಗ ಬಂತು. ಆದರೂ ಅವರು 'ನಿಮ್ಮನ್ನು ಕಂಡು ಸುಮ್ಮನಾದೆ. ಸಾಯ್! ಯಾರು ಸಾಯಬೇಕಂತೆ? ಏಕೆ ಸಾಯಬೇಕಂತೆ?' ಎಂದು ಪುನಃ ಮೆಲ್ಲಗೆ ಹೇಳಿದರು.

'ಕಾರ್ಯಕ್ರಮದ ಪಟ್ಟಿಯ ಮೇರೆಗೆ' 'ಸ್ವಾಗತ ಗೀತ' ಆಯಿತು; 'ಶಾಲಾ ವರದಿ' ಆಯಿತು; 'ಹನುಮನ ಹಾವಳಿಯ' ಪದ್ಯಗಳು ಆಯಿತು; 'ಚಂದ್ರಲೋಕ–ಭೂಲೋಕ'ದವರ ಸಂವಾದ ಆಯಿತು. 'ಅರಗಿನ ಎಮ್ಮೆ'ಯ ಪ್ರಹಸನ ಆಯಿತು. 'ಬಹುಮಾನ' ಹಂಚಿದ್ದಾಯಿತು. ಈಗ ಅಧ್ಯಕ್ಷರ ಭಾಷಣ.

ಕಾರ್ಯಕ್ರಮದ ಕೊನೆಯ ಭಾಗವು ಅಧ್ಯಕ್ಷರ ಭಾಷಣ ಅವರು ಎದ್ದು ನಿಂತರು. ಸಭಿಕರೂ ಕಿವಿಯರಳಿಸಿ ಕುಳಿತರು.

ಮೇಸ್ಟರರು ತಮ್ಮ ಹೆಗ್ಗಳಿಕೆಯನ್ನು ಅಧ್ಯಕ್ಷರು ಸಾರುವರಾಗಿ ಕಣ್ಣರಳಿಸಿದರು. ಬಹುಮಾನ ಪಡೆದ ವಿದ್ಯಾರ್ಥಿಗಳು ತಮ್ಮನ್ನು ಹೊಗಳುವರೆಂದು ಕಿವಿ ಅರಳಿಸಿದರು. ಎಂತೂ ಅಧ್ಯಕ್ಷರು ಮಾತು ಮುಂದರಿಸಿದರು. 'ಹುಡುಗರೆ! ರಾಜನೆಂದರೆ ದೇವರು. ಆದ್ದರಿಂದ ರಾಜರಲ್ಲಿ ಭಕ್ತಿ ಇಡಿ. ರಾಜದ್ರೋಹ ಮಾಡಬೇಡಿ!'

ಅಧ್ಯಕ್ಷರು ಕುಳಿತರು. ಭಾಷಣ ಮುಗಿಯಿತೆಂದು ಯಾರಿಗೂ ತಿಳಿಯಲಿಲ್ಲ. ಸಭೆ ಸ್ವಲ್ಪ ಹೊತ್ತು ನಿಶ್ಶಬ್ದ! ಅನಂತರ, ಒಬ್ಬೊಬ್ಬರೇ ಒಬ್ಬರ ಮುಖ ಮತ್ತೊಬ್ಬರು ನೋಡುತ್ತ ಚಪ್ಪಾಳೆ ಹೊಡೆಯಲು ಆರಂಭಿಸಿದರು. ಅದು ಭಾಷಣದ ಸ್ವಾರಸ್ಯಕ್ಕೋ! ಅಧ್ಯಕ್ಷರನ್ನು 'ತಮಾಷೆ' ಮಾಡುವುದಕ್ಕೋ! ಏನೆಂದು ಯಾರಿಗೆ ಗೊತ್ತು?

ಅಧ್ಯಕ್ಷಸ್ಥಾನಕ್ಕೆ ವಂದನೆಗಳನ್ನು ಸಲ್ಲಿಸಿ, ಹೆಡ್‌ಮೇಸ್ಟರರು ಸಭೆಯನ್ನು ವಿಸರ್ಜಿಸಿದರು. "ಒಳ್ಳೇಯ ಅಧ್ಯಕ್ಷರಯ್ಯ! 'ರಾಜಭಕ್ತಿ', 'ರಾಜದ್ರೋಹ' ಇವೆರಡೇ ಅವರಿಗೆ ಗೊತ್ತು" ಎಂದು ಜನಗಳು ನಗುತ್ತ ಹೊರಟು ಹೋದರು. 'ಬಹುಮಾನಪಟ್ಟ' ಹುಡುಗರು, ಪುಸ್ತಕಗಳ ಮೂಟೆಕಟ್ಟಿ, ಅವನ್ನು ಅವರಿವರಿಗೆ ತೋರಿಸುತ್ತ, ಗಂಭೀರವಾಗಿ ಆನಂದದಿಂದ ನಡೆದರು.

ಅಂದು ರಾತ್ರಿಯಲ್ಲಿ 'ತಾಳಮದ್ದಳೆ' ಇತ್ತು. ರಾತ್ರಿ ಊಟವಾದ ಬಳಿಕ, ಸುಮಾರು 11 ಗಂಟೆಗೆ ಪ್ರಾರಂಭವಾಗಿ 'ಕೃಷ್ಣಸಂಧಾನ'ವು ಸಾಗಿತು. ಕೆಲ ಮೇಸ್ಟರರೂ ಅರ್ಥ ಹೇಳಿದರು. ಭಾಗವತರೂ ಮೃದಂಗಗಾರರೂ, ಅದೇಕೋ, ಅರ್ಥ ಹೇಳುವವರ ಕುರಿತಾಗಿ ಪಿಸು ಮಾತನಾಡುತ್ತ, ಮದ್ದಳೆಯ ಕೂಟವನ್ನು ಬೆಳಗಿನ ಜಾವದಲ್ಲೇ ನಿಯಮ ಪ್ರಕಾರ ಮುಗಿಸಿದರು. ಸಭೆಗೆ ಬಂದವರಲ್ಲಿ 'ಸಂಧಾನ'ವಾಗುವ ಮೊದಲೇ ಹೊರಟವರಲ್ಲದೆ, ಉಳಿದವರೆಲ್ಲ ಸುಖನಿದ್ರೆ ಹೋಗಿದ್ದರು.

---

## ಮೂರನೆಯ ಅಧ್ಯಾಯ.

## ಮುಂದಿನ ಓದು.

ಸುಬ್ಬಾ ಶಾಸ್ತ್ರಿಗಳು ಶ್ರೀರಾಮಪುರದವರು. ಅವರು ಪುರೋಹಿತರು; ಅವರಿಗೆ ಊರಿನಲ್ಲಿ ಸ್ವಲ್ಪ ಜಮೀನು ಇತ್ತು; ಮನೆಯಲ್ಲಿ 3 ಹೆಣ್ಣು, 1 ಗಂಡೂ ಇದ್ದುವು. ಗಂಡುಹುಡುಗನ ಹೆಸರು 'ಗುಂಡು';—'ನಾಮಕರಣದ' ದಿವಸ, ಯಾರೋ ಒಬ್ಬಾಕೆ, 'ಮಗು' ದುಂಡಗಿದೆ' ಎಂದು ಈ ಹೆಸರು ಇಟ್ಟದ್ದು. ಆದರೆ ಆ ಹೆಸರು ಗುಂಡೂ ಅಜ್ಜಿಯ ಗಂಡನ ಹೆಸರಾದ ಕಾರಣ, ಅಜ್ಜಿ ಹಾಗೆ ಕರೆಯಲಾಗದೆ 'ತಮ್ಮೂ' ಎಂದು ಕರೆಯುತ್ತಿದ್ದರು. ಆ ಹೆಸರೇ ಈಗ ಎಲ್ಲರ ಬಾಯಲ್ಲಿಯೂ ನೆಲೆ ನಿಂತಿತು. ಈಗ ಅವನು ವ್ಯವಹಾರದಲ್ಲಿ 'ಗುಂಡೂ' ಅಲ್ಲ; 'ತಮ್ಮೂ'.

ತಮ್ಮು ಬಹಳ ಒಳ್ಳೇಯ ಹುಡುಗ. ನೆರೆಕೆರೆಯವರ ಸಮಯಕ್ಕೆ ಒದಗುವವ. ಕಾಗದ ಬರೆಯಲಿಕ್ಕೂ ಅವನು ಬೇಕು; ಔಷಧ ತರಲಿಕ್ಕೂ ಅವನು ಬೇಕು; ಅಂಗಡಿಯಿಂದ ಸಾಮುಗ್ರಿಗಳನ್ನು ತಂದು ಕೊಡುವುದಕ್ಕೂ ಅವನು ಬೇಕು. ಹೀಗಾಗಿ ಅವನು ಬರೀ 'ತಮ್ಮು'ವಲ್ಲ; 'ನಮ್ಮ ತಮ್ಮು'ವೇ ಆಗಿದ್ದನು.

ತಮ್ಮು ಶ್ರೀರಾಮಪುರದ ಶಾಲೆಯ ವಿದ್ಯಾರ್ಥಿ. ಅವನೀಗ 'ಲೋವರ್ ಸೆಕಂಡರಿ' ತರಗತಿಯಲ್ಲಿ ಮೊದಲನೆಯವನಾಗಿ ಪಾಸಾಗಿದ್ದಾನೆ. ಅವನಿಗೆ ಬಹುಮಾನ ನಿನ್ನೆ ಒಂದಲ್ಲ; ಎರಡು ಮೂರು. ಅವನು 'ಪ್ರಹಸನ'ದ ಪಾತ್ರವನ್ನು ಚೆನ್ನಾಗಿ ಅಭಿನಯಿಸಿದ್ದನೆಂದು ಅಜ್ಜಿ ಕೇಳಿ, 'ನಮ್ಮ ತಮ್ಮೂಗೇ, ಬಹುಮಾನ ಬಂತೇ? ನಮ್ಮ ತಮ್ಮೂ ವೇಷಾ ಹಾಕಿದ್ದನೇ? ಸಾಯುವ ಮುದುಕಿ; ನಾನೂ ಒಂದಿಷ್ಟು ನೋಡುತಿದ್ದೆ ನನ್ನನ್ನು ಯಾರು ಕರೆದು ಕೊಂಡು ಹೋಗುವರು?' ಎಂದು ಗೊಣಗಿದಳಂತೆ. ತಮ್ಮುವಿನ ರಟ್ಟೇ ಹಿಡಿದು ಕುಳ್ಳಿರಿಸಿ, ದೃಷ್ಟಿ ಬಳಿದು ಹಾಕಿದಳಂತೆ. ನೆರೆಯ ರಾಮಾಶಾಸ್ತ್ರಿ ಗಳ ಹೆಂಡತಿ, ಇದನ್ನು ನೋಡಿ, 'ತಮ್ಮೂಗೆ ನಾನೂ ಒಂದು ಚೆಂದವಾದ ಬಹುಮಾನ ಸಿದ್ಧಮಾಡಿ ಇಟ್ಟಿದ್ದೇನೆ,—ನಮ್ಮ ಸರಸ' ಎಂದಳಂತೆ.

'ಹೆಡ್‌ಮೇಸ್ಟರ್ ಏಕೆ ಹೇಳಿ ಕಳುಹಿದರೋ ಎಂದು ಹೋಗಿದ್ದೆ. ತಮ್ಮು ಬುದ್ಧಿಶಾಲಿ. ಮುಂದಕ್ಕೆ ಓದಿಸು ಅಂತ ಒತ್ತಾಯ ಮಾಡು ತ್ತಿದ್ದಾರೆ. ನಾನೇನೋ 2 ಹೆಣ್ಣುಮಕ್ಕಳ ಲಗ್ನ ಮಾಡಿ ಕೈಸೋತವನು. ಹೇಗೆ ಓದಿಸಲಿ ಎಂತ ತಾಪತ್ರಯ ಹೇಳಿಕೊಂಡೆ. ತಮ್ಮುವೂ ಒಂದು ಹೆಣ್ಣು ಎಂದು ತಿಳಿದುಕೊಳ್ಳಿ; ಒಂದು ಲಗ್ನ ಮಾಡಿದೆ ಎಂದು ತಿಳಿದು ಕೊಳ್ಳಿ. ಒಂದು ಐನೂರು ರೂಪಾಯಿ ಆ ಲಗ್ನಕ್ಕೆ ಖರ್ಚಾಯಿತೆಂದು ತಿಳಿದು ಕೊಳ್ಳಿ. ಅಷ್ಟರಲ್ಲಿ ಅವನು 'ಮೆಟ್ರಿಕ್' ಪ್ಯಾಸ್ ಮಾಡುತ್ತಾನೆ. ಕೂಡಲೇ ಅವನು ಹೆಣ್ಣು ಹೋಗಿ ಗಂಡು ಆಗುತ್ತಾನೆ. ಹೆಣ್ಣು ಕೊಡು ವವರು ಬರುತ್ತಾರೆ. ವರದಕ್ಷಿಣೆ ಕೊಟ್ಟು ಓದಿಸುತ್ತಾರೆ. ಅಲ್ಲಿನ ತನಕ ನಿಮಗೆ ಸ್ವಲ್ಪ ಭಾರ, ಅಂದರು. ಏನು ಮಾಡಲಿ, ಅಮ್ಮಾ?' ಎನ್ನುತ್ತ ಶಾಸ್ತ್ರಿಗಳು, ಒಂದು ರಾತ್ರಿ ಪ್ರಸ್ತಾಪಿಸಿದರು.

ಮುದುಕಿ, 'ಬೇಡ' ಅಂದಳು. ಒಂದೇ ಗಂಡುಮಗು; ಒಂದನ್ನೇ ಪರವೂರಿಗೆ ಕಳಿಸಲಾಗುವುದಿಲ್ಲ ಅಂದಳು. ೬ ವರ್ಷಕ್ಕೆ ತನಗೆ ಮದುವೆ ಯಾದಂತೆ ತಮ್ಮಗೂ ಈಗಲೇ ಮದುವೆ ಆಗಬೇಕೆಂದು ಅಂದಳು. ಪೌರೋಹಿತ್ಯವನ್ನೇ ಎರಡೆರಡು ಗಳಿಗೆ ನೀನು ಹೇಳಿಕೊಟ್ಟರೆ ಸಾಕು ಅಂದಳು. ಸೊಸೆ 'ಮದುವೆಗೆ ಹುಡುಗ ಚಿಕ್ಕವ; ಮುಂದೆ ಓದಲೆ'ಂದು ದಕ್ಕೆ 'ನನ್ನ ಮಾತಿಗೆಲ್ಲ ನೀನು ಎದುರಾಡುವವಳೇ' ಎಂದು ಮುದುಕಿ ಅತ್ತೆ ಹಂಗಿಸಿದಳು. 'ಹೆಂಡತಿಯ ಮಾತು ನಿಜವಲ್ಲವೇ?' ಎಂದು ಮಗ ಕೇಳಿ ದುದಕ್ಕೆ 'ನೀನೂ ಹೆಂಡತಿಯ ಕಡೆ ಕಣೋ!' ಎಂದು ರೇಗಿದಳು. ಕೊನೆಗೆ ಶಾಸ್ತ್ರಿಗಳು:—'ಅಮ್ಮಾ! ನಿನ್ನ ಮೊಮ್ಮಗ ಮೆಟ್ರಿಕ್ 'ಪ್ಯಾಸ್' ಮಾಡಿ, ದುಡ್ಡಿದ್ದವರು ಹೆಣ್ಣು ಕೊಡುತ್ತೇವೆಂದು ನಿನ್ನ ಕಾಲ ಬುಡಕ್ಕೆ ಬರುವಾಗ ನಿನಗೆ ಬೇಡವಾದೀತೇ? ನಿನ್ನ ಮೊಮ್ಮಗ ದೊಡ್ಡ ಉದ್ಯೋಗ ಸಂಪಾದಿಸಿ, ನಿನ್ನ ಕೈಗೊಬ್ಬ, ಕಾಲಿಗೊಬ್ಬ ಊಳಿಗದವರನ್ನಿಡುವಾಗ ನಿನಗೆ ಬೇಡವಾದೀತೇ?' ಎಂದು ಕೇಳಿದರು.

'ಹಾಗೂ ಉಂಟೇ? ಸುಬ್ಬೂ! ಇಂಗಲೀಸ್ ಪರೀಕ್ಷೆ ಮಾಡಿದರೆ? ಆಗಲಪ್ಪ. ನಿಮ್ಮ ಇಬ್ಬರಿಗೂ ಬೇಕಾದರೆ, ನನಗೂ ಬೇಕು' ಎಂದು ಮುದುಕಿ ಸುಮ್ಮಗಾಯಿತು.

ತಮ್ಮ ಮುಂದೆ ಓದಬೇಕೆಂದು ನಿಶ್ಚಯವಾಯಿತು; ಶಿವರಾಜ ಪುರದ 'ನೇಟಿವ್ ಹಾಯ್ ಸ್ಕೂಲ್'ನಲ್ಲಿ! ಅದರಂತೆ ತಮ್ಮ ನೋಡಬೇಕಾದವರನ್ನೆಲ್ಲ ನೋಡಿದ್ದಾಯಿತು; ಬಟ್ಟೆ, ಪುಸ್ತಕಗಳನ್ನೆಲ್ಲ ಗಂಟು ಕಟ್ಟಿ ಇಟ್ಟದ್ದಾಯಿತು. ನೆರೆಕರೆಯವರಿಗೆ 'ಕಣ್ಣಮುಂದೆ ಓಡಾಡುತ್ತಿತ್ತು; ತಾ, ಬಾ ಎಂದ ಕೆಲಸಕ್ಕೆ ಒದಗುತ್ತಿತ್ತು; ಅಂಥಾ ಹುಡುಗ ಹೋಗಿ ಬಿಡುತ್ತದಲ್ಲ!' ಎಂದು ಬಹಳ ಬೇಸರ. ತಮ್ಮುವಿಗೂ ಹುಟ್ಟಿ ಬೆಳದ ಊರನ್ನೂ, ನೆರೆಕರೆಯನ್ನೂ ಬಿಟ್ಟು ಅಗಲಬೇಕೆಂದು ವಿಪರೀತ ವ್ಯಸನ. ಏನು ಮಾಡಲಾದೀತು?

ಹೊರಡುವ ದಿನ ಬೆಳಗ್ಗೆ ಶಾಸ್ತ್ರಿಗಳು, ತಮ್ಮುವನ್ನು ಕರೆದುಕೊಂಡು ಹೆಡ್‌ಮೇಸ್ಟರರಲ್ಲಿಗೆ ಹೋದರು. ಹೆಡ್‌ಮೇಸ್ಟರರು 'ಶಾಸ್ತ್ರಿಗಳೇ ಅಂತೂ

ನನ್ನ ಮಾತು ನೀವು ನಡೆಸಿದಿರಿ' ಎಂದು ಸಂತೋಷದಿಂದ ಉಪಚರಿಸಿದರು. ಅನಂತರ ತಮ್ಮುವನ್ನು ನೋಡಿ,—

'ಇನ್ನು ನೀನು ದೊಡ್ಡ ಶಾಲೆಗೆ ಹೋಗುತ್ತೀ. ಆದರೆ ಈ ಸಾಲೆಯನ್ನು ಮರೆಯಬೇಡ. ಆ ಶಹರಿನಲ್ಲಿ ದುಂದುವೆಚ್ಚ, ದುರಾಚಾರ, ದುಷ್ಟ ಸಹವಾಸ ಇವುಗಳಿಗೆ ಸಾಕಷ್ಟು ಅವಕಾಶವಿದೆ. ಅದಕ್ಕೆ ಎಂದಿಗೂ ಮನಸ್ಸು ಕೊಡಬೇಡ. ಕಷ್ಟಪಟ್ಟು ಓದು. ಕ್ಲಾಸಿನ ಪಾಠಗಳನ್ನು ಲಕ್ಷ್ಯವಿಟ್ಟು ಕೇಳು. ಗುರುಗಳಿಗೆ ವಿಧೇಯನಾಗಿ ವರ್ತಿಸು. ಅಂಗಸಾಧನೆಯನ್ನು ಬಿಡಬೇಡ. ಕ್ರಿಕೆಟ್, ಫುಟ್‌ಬಾಲ್ ಮೊದಲಾದ ಆಟಗಳಲ್ಲಿ ಇಲ್ಲಿ ನೀನು ಹೆಸರು ಪಡೆದಂತೆಯೇ ಅಲ್ಲಿಯೂ ಸಾಧಿಸು. 'ಸ್ಪೋರ್ಟ್'ನ ಸ್ಪರ್ಧೆಗೂ ಹೋಗದೆ ಹಿಂಜರಿಯಬೇಡ' ಎನ್ನುತ್ತ ಒಳಗೆ ಹೋಗಿ ಒಂದು ಪುಸ್ತಕ ತಂದರು. ಅದರಲ್ಲಿ ಬರೆದಿಟ್ಟಿದ್ದ ಶಾಲೆ ಬಿಡುವ 'ಸರ್ಟಿಫಿಕೇಟನ್ನು' ಶಾಸ್ತ್ರಿಗಳಿಗೆ ಕೊಟ್ಟರು. 'ಇದೇನು ತಿಳಿಯಿತೇ? ತಮ್ಮೂ? ಪದ್ಯಮಂಜರಿಯ ಟಿಪ್ಪಣಿಯ ಪುಸ್ತಕ. ನಾನೇ ಬರೆದದ್ದು. ನಿನಗೆ ಬೇಕಾದೀತು. ಇದನ್ನು ಅಲ್ಲಿನ ನಿಮ್ಮ ಪಂಡಿತರಿಗೆ ತೋರಿಸಿ, ನನಗೆ ಅವರ ಅಭಿಪ್ರಾಯ ತಿಳಿಸು' ಎಂದು ಪುಸ್ತಕವನ್ನು ತಮ್ಮುವಿನ ಕೈಯಲ್ಲಿಟ್ಟರು. 'ಹೋಗಿ ಬನ್ನಿ ಶಾಸ್ತ್ರಿಗಳೇ! ಹೋಗಿ ಬಾರಪ್ಪ! ತಮ್ಮೂ!' ಎಂದರು. ಅವರನ್ನು ಅಗಲುವನಾಗಿ ಕಣ್ಣೀರು ಬಿಡುತ್ತ, ದೊಡ್ಡೂರು ಸೇರುವನಾಗಿ ಆನಂದಿಸುತ್ತ ನಗುತ್ತ ಅಳುವ ತಮ್ಮು, ಮನೆಗೆ ಮರಳಿದನು.

---

## ನಾಲ್ಕನೆಯ ಅಧ್ಯಾಯ.

### ಪ್ರಯಾಣ

ಹೊತ್ತು ಮುಳುಗಲು 2 ಗಳಿಗೆಗೆ ಮೊದಲೇ ರಾಮಯ್ಯ ಗಾಡಿ ತಂದು ಶಾಸ್ತ್ರಿಗಳ ಮನೆಯ ಹತ್ತಿರ ಬಿಟ್ಟಿದ್ದ. ಶಾಸ್ತ್ರಿಗಳೂ, ತಮ್ಮುವೂ ರಾತ್ರಿ ಊಟ ಮುಗಿಸಿ ಪ್ರಯಾಣಕ್ಕೆ ಸಿದ್ಧರಾಗಿದ್ದರು. ಗಂಟುಗಳನ್ನೂ,

ಒಂದು ಮರದ ಪೆಟ್ಟಿಗೆಯನ್ನೂ ರಾಮಯ್ಯ ಗಾಡಿಗೆ ಹಾಕಿ, ಅದರ ಮೇಲೆ ಹುಲ್ಲು ಹರವಿ, ಚಾಪೆ ಹಾಸಿದ.

ಹೊರಡುವ ಮುಹೂರ್ತ ಬಂತು. ತಾಯಿ ತಮ್ಮನನ್ನು ಅಪ್ಪಿಕೊಂಡು ಅತ್ತಳು; ಅಜ್ಜಿಯೂ ಅತ್ತಳು. ಹೆಣ್ಣುಮಕ್ಕಳೂ ಅತ್ತರು. ಅಜ್ಜ ಒಂದು ಮೂಲೆಯಲ್ಲಿ ಕುಳಿತು, ಅಳುತ್ತಾ, 'ಹಾಗೆ ಮಾಡಬಾರದು: ಹೀಗೆ ಮಾಡಬಾರದು' ಎಂದು ಮೊಮ್ಮಗನಿಗೆ ನಡುನಡುವೆ ಬುದ್ಧಿವಾದ ಹೇಳುತ್ತಿದ್ದಳು. ಶಾಸ್ತ್ರಿಗಳು ನೋಡಿ 'ಏನಿರೇ? ನಿಮ್ಮ ಅಳು? ಒಳ್ಳೆಯ ಕೆಲಸಕ್ಕೂ ಅಳುವೇ? ಸಾಕು, ನಿಲ್ಲಿಸಿ'ರೆಂದು ಗದರಿಸಿದರು. ತಮ್ಮನನ್ನು 'ಬಾ!' ಎಂದರು. ರಾಮಯ್ಯನಿಗೆ ಗಾಡಿ ಕಟ್ಟಲು ಹೇಳಿದರು.

ರಾಮಯ್ಯ, ಎತ್ತುಗಳ ಮುಂದೆ ಹಾಕಿದ್ದ ಬೈಹುಲ್ಲನ್ನು ಆರಿಸಿ ಗಾಡಿಯ ಮೇಲಕ್ಕೆ ಎಸೆದು, ಗಾಡಿ ಕಟ್ಟಿದ; ಕತ್ತರಿಯ ಮೇಲೆ ಕುಳಿತ. ಅಷ್ಟರಲ್ಲಿ ಅಜ್ಜ ಓಡಿ ಬಂದು 'ಮರೆತಿದ್ದೆ' ಎಂದು ಒಂದು ಪುಟ್ಟ ಗಂಟು ಅವನ ಕೈಗೆ ಕೊಟ್ಟಳು. ಗಂಟಿನಲ್ಲಿ, ಇಷ್ಟು ಅವಲಕ್ಕಿ, ಅರಳು ಹಿಟ್ಟು, ಒಂದಿಷ್ಟು ಹಲಸಿನಕಾಯಿ ಹಪ್ಪಳ ಇದ್ದುವು.

ರಾಮಯ್ಯ ಎತ್ತುಗಳ ಬಾಲ ತಿರುಪಿದ. ಗಾಡಿ ಹೊರಟಿತು.

ಆಗ ಮೂರು ಸಂಜೆ ದಾಟಿತ್ತು ಅಂಗಡಿಗಳಲ್ಲಿಯೂ, ಮನೆಗಳಲ್ಲಿಯೂ ದೀಪ ಹಚ್ಚಿತ್ತು. ಕೆಲವು ಅಂಗಡಿಗಳಲ್ಲಿ ವ್ಯಾಪಾರ ನಡೆಯುತ್ತಿತ್ತು;—ಕೆಲವರು ಕೊಳ್ಳುತ್ತಿದ್ದರು; ಕೆಲವರು ದುಡ್ಡು ಕೊಡುತ್ತಿದ್ದರು; ಕೆಲವರು ಕೊಂಡ ಸಾಮಗ್ರಿಗಳನ್ನು ಹೊತ್ತುಕೊಂಡು ಮನೆಗೆ ಹಿಂದಿರುಗುತ್ತಿದ್ದರು. ದೇವಸ್ಥಾನದಲ್ಲಿ, ಈ ಹೊತ್ತಿನಲ್ಲಿಯೇ ರಂಗಪೂಜೆ ನಡೆಯುತ್ತಿದ್ದು, ಪೂಜಾಕಾಲದ ಗಂಟೆಗಳ ಧ್ವನಿ ಕೇಳುತ್ತಿತ್ತು. ನೋಡುತ್ತಿದ್ದ ಹಾಗೆ, ರಾಮಯ್ಯನ ಗಾಡಿ, ಸಿದ್ದಪ್ಪನವರ ಮಳಿಗೆ ದಾಟಿತು; ಶೇಷಯ್ಯನವರ ಅಡಿಕೆ ಮಂಡ್ಯ ದಾಟಿತು; ರಾಮಪ್ಪನವರ ಭತ್ತದ ಭಂಡಸಾಲೆ ದಾಟಿತು. ಮುಸಾಫರೀ ಕೆರೆ ದಾಟಿತು. ಅರಳೀಕಟ್ಟೆ ದಾಟಿತು. ಇನ್ನೇನು, ಗಾಡಿ ಕೂಸಯ್ಯನವರ ಅಂಗಡಿ ದಾಟತೆನ್ನುವಷ್ಟರಲ್ಲಿ, ರಾಮಯ್ಯ

ಗಾಡಿ ನಿಲ್ಲಿಸಿ, ಕೆಳಗಿಳಿದ. ಅಂಗಡಿಯಿಂದ ಲಾಟೀನಿಗೆ ಎಣ್ಣೆ ಹಾಕಿಸಿದ; ಬೆಂಕೀ ಪೆಟ್ಟಿಗೆ ತೆಗೆದುಕೊಂಡು ಲಾಂದ್ರ ಹಚ್ಚಿದ. ಎಲೆಯಡಿಕೆ ಕಟ್ಟಿದ. 'ಎತ್ತಕಡೆ?' ಎಂದು ಯಾರೋ ಗುರುತದವರು ಕೇಳಿದುದಕ್ಕೆ 'ಶಿವರಾಜ್ಯಪುರಕ್ಕೆ; ಒಂದು ಸವಾರಿ' ಎನ್ನುತ್ತ ಗಾಡಿಯ ಮೇಲೆ ಕುಳಿತ. ಗಾಡಿ ಬಿಟ್ಟ.

ಶ್ರೀರಾಮಪುರದಿಂದ 3 ಮೈಲು ದಾಟಿದ ಕೂಡಲೇ, ದೊಡ್ಡ ಕಾಡು. ಏಳೆಂಟು ಮೈಲುಗಳ ವರೆಗೆ ಮನೆ ಮಠಗಳೊಂದೂ ಇಲ್ಲ. ಅಲ್ಲಿ ಸಂಜೆಯಾದ ಬಳಿಕ ಮನುಷ್ಯರ ಸುಳಿವಿಲ್ಲ. ಗಾಡಿಗಳಾದರೂ, ಒಂಟಿಯಾಗಿ ತಿರುಗುವುದು ಅಪರೂಪ. ಅಲ್ಲಿ ಹುಲಿಗಳ ಕಾಟ ವಿಪರೀತ. ರಾತ್ರಿಯಾದ ಮೇಲೆ ಹುಲಿಗಳು ನಿರ್ಭಯವಾಗಿ ಬಂದು ರಸ್ತೆಯ ಮೇಲೆ ಕುಳ್ಳಿರುವುದಿತ್ತು. ರಾಮಯ್ಯನೂ ಒಂದೆರಡು ಸಲ ಅದೇ ರಸ್ತೆಯಲ್ಲಿ ಹುಲಿಗಳನ್ನು ನೋಡಿದ್ದ. ಹುರುಳಿ ಬೇಯಿಸುವ ಎರಡು ಖಾಲಿ ಡಬ್ಬಿಗಳನ್ನು ಗಾಡಿಯ ಕತ್ತರಿಯ ಅಡಿಗೆ ತೂಗಿಸಿದ್ದ;—ಅವು ಒಂದನ್ನೊಂದು ಬಡೆದು ಹುಲಿಗಳಲ್ಲಿ ದಿಗಿಲೆಬ್ಬಿಸಲೆಂದೂ ರಾಮನ ಆನೆ! ಅಥವಾ ಗಟ್ಟಿಯಾಗಿ ಮಾತಾಡುತ್ತಿದ್ದರೆ, ಆ ಶಬ್ದಕ್ಕೆ ಬೆದರಿ, ಹುಲಿಗಳು ಓಡುವವೆಂದು ಯೋಚಿಸಿ, ಅವನು ಒಮ್ಮೆ ಎತ್ತುಗಳೊಡನೆಯೂ ಒಮ್ಮೆ ಶಾಸ್ತ್ರಿಗಳೊಡನೆಯೂ ಮಾತಾಡುತ್ತ ಗಾಡಿ ಹೊಡೆಯುತ್ತಿದ್ದ. ಅವನ ಮಾತುಕತೆಗಳಿಗೆ ತುದಿಬುಡವೇ ಇಲ್ಲ. ಊರಿನ ಸುದ್ದಿ ಕೆಲವು; ಮಳೆಬೆಳೆಗಳ ಸುದ್ದಿ ಕೆಲವು; ತನ್ನ ಗಾಡಿ-ಎತ್ತಿನ ಸುದ್ದಿ ಕೆಲವು;—ಇದಕ್ಕೆಲ್ಲ ಹೂಂಗುಟ್ಟಿ ಶಾಸ್ತ್ರಿಗಳಿಗೆ ಸಾಕಾಗಿ ಹೋಯಿತು. ಅವರಿಗೆ ಅಲ್ಲಿಯೇ ಜಂಪು ಹಿಡಿಯಿತು.

ಶ್ರೀರಾಮಪುರದ ಗಡೀ ಕಲ್ಲು ದಾಟಿದ ಕೂಡಲೇ, ತಮ್ಮ, ತೂಕಡಿಸಲಿಕ್ಕೆ ಆರಂಭಿಸಿದ. ಕುಳಿತಿದ್ದವನು ಹಾಗೆಯೇ ಮುದುಡಿಕೊಂಡು ಮಲಗಿದ. ಅವನಿಗೆ ನಿದ್ರೆ ಚೆನ್ನಾಗಿ ಹಿಡಿಯಲಿಲ್ಲ. ರಾಮಯ್ಯ 'ಹೈ, ಹೈ' ಎಂದು ಎತ್ತುಗಳನ್ನು ಹೊಡೆಯುತ್ತಿದ್ದುದು ಅವನಿಗೆ ಕೇಳುತ್ತಿತ್ತು. 'ರಾಮಾ, ಸುಬ್ಬ' ಎಂದು ಅವನು ಎತ್ತುಗಳನ್ನು ಕರೆದು ಕರೆದು ಮಾತಾಡುತ್ತಿದ್ದದ್ದು ಕೇಳು

ತ್ತಿತ್ತು. ಅವನು 'ಗಾಡೀ ರಾಗ'ವನ್ನು ಸರಾಗವಾಗಿ ಹಾಡುತ್ತಿದ್ದುದು ಕೇಳು ತ್ತಿತ್ತು. ಎತ್ತುಗಳ ಗಂಟೆಯ ಶಬ್ದವೂ, ಚಕ್ರಗಳ ಶಬ್ದವೂ ಕೇಳುತ್ತಿತ್ತು. ಅವನು ಶ್ರೀರಾಮಪುರದ ಸಾಹುಕಾರರ ಸುದ್ದಿ ಶಾಸ್ತ್ರಿಗಳೊಡನೆ ಮಾತಾಡುತ್ತಿದ್ದುದು ಕೇಳುತ್ತಿತ್ತು. ಹಾಗೆಯೇ ಅವನಿಗೆ ಸ್ವಲ್ಪ ಹೊತ್ತಿನ ಮೇಲೆ ಚೆನ್ನಾಗಿ ನಿದ್ದೆ ಹಿಡಿಯಿತು. ಅಷ್ಟರಲ್ಲಿ 'ಅಯ್ಯಾ! ಅಯ್ಯಾ! ಇಲ್ಲಿ ನೋಡಿ!' ಎಂದು– ರಾಮಯ್ಯ ಕೂಗಿದ್ದನ್ನು ಕೇಳಿ, ಎಚ್ಚರವಾಯಿತು. ಶಾಸ್ತ್ರಿಗಳು ಎದ್ದು ಕುಳಿತರು. 'ಏನು, ಏನಾಯಿತು, ರಾಮಯ್ಯ?' ಎಂದು ಕೇಳಿದರು.

ರಾಮಯ್ಯ, ಗಾಬರಿಯಿಂದ, 'ಏನು ಹೇಳಲಿ, ಅಯ್ಯಾ! ನಾನು ತೂಕಡಿಸುತ್ತಾ ಗಾಡಿ ಹೊಡೆಯುತ್ತಿದ್ದೆ. ಈ ಸಂಕಕ್ಕೆ ಅರ್ಧ ಫರ್ಲಾಂಗಿರು ವಾಗ, ಎಚ್ಚರಿಕೆ ಆಯಿತು. ನೋಡುತ್ತೇನೆ—ಸಂಕದ ಮೇಲೆ ಮೂರು ಪುರುಷ–ಪ್ರಮಾಣದ ಒಂದು ಆಕಾರ ನಿಂತಿದೆ. ಅದೇ ತಮ್ಮನ್ನು ಕರೆದೆ. ಆ ಆಕಾರವೂ, ಕೂಡಲೇ, ಕಾಡಿನೊಳಗೆ ಹಾದು ಹೋಯಿತು. ನೆನಸಿದರೆ ಕೈ ಕಾಲು ಜುಮ್ಮೆನ್ನುತ್ತದೆ. ತಾವು ಇನ್ನು ನಿದ್ರಿಸಬೇಡಿರಿ. ಇದು ಕೆಟ್ಟ ಜಾಗ. ಇಲ್ಲಿ ಜತೆ ಗಾಡಿಗಳಿಲ್ಲದೆ ಪ್ರಯಾಣ ಮಾಡಬಾರದು' ಎಂದ.

ಶಾಸ್ತ್ರಿಗಳು ಮತ್ತೆ ಮಲಗಲಿಲ್ಲ. ತಮ್ಮುವೂ, ಹೆದರಿ ಸ್ವಲ್ಪ ಹೊತ್ತು ನಿದ್ರಿಸಲಿಲ್ಲ. ರಾಮಯ್ಯ ಪುನಃ ಹರಟೆಗೆ ಆರಂಭಿಸಿದ. 'ಹಿಂದೆ ಯೊಮ್ಮೆ, ಶೃಂಗೇರಿ ಮಾರ್ಗದಲ್ಲಿ, ಹೀಗೆಯೇ ಆಗಿತ್ತು.' ಆ ದಿನ ನಾನೊಬ್ಬನೇ. ಒಂದು ಹೆಂಗಸಿನ ಆಕಾರ ಹೀಗೆಯೇ ಒಂದು ರಸ್ತೆ ಬುಡ ದಲ್ಲಿ ಕುಳಿತಿತ್ತು. ನನ್ನನ್ನು ಕಂಡ ಕೂಡಲೇ ಗಾಡಿಯ ಸಮೀಪ ಬಂದು, ಸುಣ್ಣ ಕೊಡೆಂದು ಕೇಳಿತು ನಾನು ಅನುಮಾನಪಟ್ಟು, ಹಾಗೂ ಧೈರ್ಯ ದಿಂದ, 'ಧರ್ಮಸ್ಥಳದ ಮಂಜುನಾಥನನ್ನು ಕೇಳು, ಹೋಗು' ಎಂದೆ. ಅದು ಅಲ್ಲಿಯೇ ಮಾಯವಾಯಿತು' ಎಂದ.

ತಮ್ಮುಗೆ ಪುನಃ ನಿದ್ರೆ ಹತ್ತಿತು. ಆದರೆ ಬಂಡಿಯ ಬಂಡಾಟದಿಂದ ಚಕ್ರಗಳು ಒಮ್ಮೆ ಏರಿನಲ್ಲಿಯೂ, ಒಮ್ಮೆ ತಗ್ಗಿನಲ್ಲಿಯೂ, ಹೊರಳುವ ಭರದಿಂದ ಆಗಾಗ ನಿದ್ರಾಭಂಗವಾಗುತ್ತಿತ್ತು. ಹೇಗೂ ಬೆಳಗಿನ ವರೆಗೆ

ಜಾಗರ; ಆ ಪಕ್ಕಕ್ಕೆ ತಿರುಗಿ, ಈ ಮಗ್ಗುಲಲ್ಲಿ ಕುಳಿತು, ಅಲ್ಲಿ ಮಲಗಿ, ಇಲ್ಲಿ ಎದ್ದು ಹೇಗೂ ಬೆಳಕು ಮಾಡಿದ್ದಾಯಿತು. ಬೆಳಕು ಹರಿಯುವ ಹೊತ್ತಿಗೆ ಗಾಡಿ 16 ಮೈಲು ಬಂದಿತ್ತು. ಇನ್ನೂ ಶಿವರಾಜಪುರಕ್ಕೆ 6 ಮೈಲು! ತಮ್ಮು ಒಂದೇ ರಾತ್ರಿಯ ಪ್ರಯಾಣದಿಂದ ಸೋತು ಸುಣ್ಣ ವಾಗಿದ್ದನು. ಗಾಡಿಯ ಕಮಾನಿನ ಬೆತ್ತವು ಅವನ ಮೈಕೈಗಳಿಗೆ ತಗುಲಿ, ನೋಯಹತ್ತಿದ್ದುವು. ಬೈಹುಲ್ಲು ಕಡ್ಡಿ ಅಲ್ಲಲ್ಲಿ ಸೋಂಕಿ, ಮೈಯಲ್ಲಿ ತುರಿಕೆ ಅವನೀಗ ಪ್ರಯಾಣದ ಬೇಸರಿಕೆಯನ್ನೂ, ಮೈಯ ಆಲಸ್ಯ ವನ್ನೂ ಕಳೆಯುವುದಕ್ಕಾಗಿ ಗಾಡಿಯ ಹಿಂಭಾಗದಲ್ಲಿ ಬಂದು ಕುಳಿತನು. ಇಳಿಬಿಟ್ಟಿದ್ದ ಗೋಣೀಚೀಲದ ಒಟ್ಟೆಯನ್ನು ಮೇಲಕ್ಕೆ ಹಾರಿಸಿ, ನೋಡ ತೊಡಗಿದನು. ರಮ್ಯವಾದ ನೋಟಗಳು! ಆ ಗುಡ್ಡಬೆಟ್ಟಗಳು, ಮೇಯಲು ಹೊರಟಿದ್ದ ಆ ದನಕರುಗಳು,—ಆ ಕಾಡು ಮೋಡಗಳು, ಧಾನ್ಯವನ್ನು ಬಿತ್ತಿ ಬೆಳೆಯಿಸಿದ್ದ ಆ ಹೊಲಗದ್ದೆಗಳು, ಗದ್ದೆಗಳ ನಡುವಿನಲ್ಲಿ, ಎತ್ತರವಾಗಿ ನಿಂತು ಪಕ್ಕಿ ಹೆದರಿಸುವ ಗೊಂಬೆಗಳು, ಅವೆಲ್ಲವೂ ಅವನಿಗೆ ಸಂತೋಷ ವನ್ನು ಉಂಟುಮಾಡಿದುವು

ಗಾಡಿಯವನು, ಸ್ವಲ್ಪ ಗಾಡಿಯನ್ನು ನಿಲ್ಲಿಸಿ, ದಣಿದಿದ್ದ ಎತ್ತುಗಳ ಬೆನ್ನು ತಟ್ಟಿದನು. ವೀಳ್ಯವನ್ನೂ ಹಾಕಿಕೊಂಡನು. 'ಅಯ್ಯ! ಇಷ್ಟ ರೊಳಗೇ ಶಿವರಾಜಪುರಕ್ಕೆ ಮುಟ್ಟುತ್ತಿದ್ದೆವು. ಒಲದೆತ್ತಿಗೆ ಹೆಗಲು ಬಂದು ಮೋಸವಾಯ್ತು! ತಿಂಗಳ ಹಿಂದೆ ಹೀಗೆಯೇ ಒಂದು ಸವಾರಿಯನ್ನು ಶಿವ ರಾಜಪುರಕ್ಕೆ ತಂದಿದ್ದೆ; ರಾತ್ರೆ 8 ಗಂಟೆಗೆ ಹೊರಟವರು, ಬುದ್ಧೀ, ಬೆಳಗಾಗ ಬೇಕಾದರೆ ಶಿವರಾಜಪುರ' ಎನ್ನುತ್ತ ಎತ್ತಿನ ಬಾಲ ತಿರುವಿದ. 'ಬೇಗ ನಡೆಯಣ್ಣಾ; ಶಿವರಾಜಪುರ ಒಂತು' ಎಂದು ಎತ್ತಿನೊಡನೆ ಹೇಳಿದ. ಶಾಸ್ತ್ರಿಗಳು, 'ಶ್ಯಾಮ ಭಟ್ಟರ ಹೊಟೇಲ್ ಎಲ್ಲಿ, ಬಲ್ಲೆಯಾ? ಅವರು ನನ್ನ ಗುರುತಿನವರು' ಎಂದು ಕೇಳಿದರು.

**ಗಾಡಿಯವ:**—'ಶ್ಯಾಮ ಭಟ್ಟರೆ, ಸ್ವಾಮಿ! ಸ್ವಲ್ಪ ದೊಡ್ಡ ಹೊಟ್ಟೆ ಯವರು?'

**ಶಾಸ್ತ್ರಿಗಳು:**—'ಹೌದು'

**ಗಾಡಿಯವ:**—'ಗಿಡ್ಡಗಿದ್ದಾರೆ.'

**ಶಾಸ್ತ್ರಿ:**—'ಅವರೇನೇ;—ಅಲ್ಲಿಗೆ ಹೊಡಿ.'

ಕ್ರಮೇಣ ಗಾಡಿ ಶ್ಯಾಮಭಟ್ಟರ ಹೊಟೆಲಿನ ಬಾಗಿಲಿಗೆ ಬಂತು. ಶ್ಯಾಮಭಟ್ಟರು ಬಾಗಿಲಲ್ಲಿಯೇ ಇದ್ದರು. ಶಾಸ್ತ್ರಿಗಳನ್ನು ಗುರುತಿಸಿ, 'ನಮಸ್ಕಾರ; ಅಪರೂಪದವರು; ಇದೇ ಬರುವ ಭರವೇನೋ! ದಯೆಮಾಡಿ' ಎಂದು ಒಳಗೆ ಕರೆದುಕೊಂಡು ಹೋದರು. ಸ್ನಾನಕ್ಕೂ, ಭೋಜನಕ್ಕೂ ಏರ್ಪಡಿಸಿದರು. ಶಾಸ್ತ್ರಿಗಳೂ, ತಮ್ಮನ್ನೂ ಉಂಡು ಸ್ವಲ್ಪ ಮಲಗಿದರು.

ಸಂಜೆಗೆ ಶಾಸ್ತ್ರಿಗಳು ತಾನು ಬಂದ ಕಾರ್ಯವನ್ನು ಭಟ್ಟರೊಡನೆ ಹೇಳಿದರು. 'ಇಲ್ಲಿ ಒಂದು ಕಾಲೇಜೂ ಉಂಟು; ಒಂದು ಹಾಯ್‌ಸ್ಕೂಲೂ ಉಂಟು. ಕಾಲೇಜಿನಲ್ಲಿ ಕಾಲೇಜ್ ಕ್ಲಾಸುಗಳಿಗೆ ಕೊಡುವಷ್ಟು ಗಮನ ಕೆಳ ತರಗತಿಗಳಿಗೆ ಕೂಡುವುದಿಲ್ಲವಂತೆ. ನಿಮಗೆ 'ನೇಟಿವ್ ಹಾಯ್ ಸ್ಕೂಲೇ ಆಗಬಹುದು' ಎಂದು ಭಟ್ಟರು ಸೂಚಿಸಿದರು. 'ಅದೇ ನನ್ನ ಯೋಚನೆ' ಎಂದು ಶಾಸ್ತ್ರಿಗಳೂ ಹೇಳಿದರು.

---

## ಐದನೆಯ ಅಧ್ಯಾಯ.

## ಹಾಯ್-ಸ್ಕೂಲು.

ಮರುದಿನ ಬೆಳಗ್ಗೆ, 9 ಗಂಟೆಗೆ ಶಾಸ್ತ್ರಿಗಳು ಮಗನೊಡಗೆ ನೇಟಿವ್ ಹಾಯಸ್ ಸ್ಕೂಲ್ ಎಲ್ಲಿ ಎಂದು ವಿಚಾರಿಸುತ್ತ ಹೊರಟರು. ಶಾಲೆಯ ಕಂಪೌಂಡಿನ ಬಳಿಗೆ ಬಂದರು. ಶಾಲೆಯ ಕಟ್ಟೋಣವು ವಿಸ್ತಾರವಾಗಿತ್ತು. ಮುಂಭಾಗದಲ್ಲಿ ಒಂದು ಚಿಕ್ಕ ಮೈದಾನೂ ಇತ್ತು. ಕಟ್ಟೋಣವನ್ನು ನೋಡಿ ತಂದೆ ಮಕ್ಕಳಿಬ್ಬರೂ ಬೆರಗಾಗಿ ನಿಂತರು. ಶಾಸ್ತ್ರಿಗಳಿಗೆ ಈಗ ಯಾವ ಕಡೆ ಹೋಗಬೇಕೆಂದು ತಿಳಿಯಲಿಲ್ಲ. ಮೈದಾನಿನಲ್ಲಿ ನಾಲ್ಕೆಂಟು

ಚಿಕ್ಕ ಪೋರರು ಚಂಡಾಡುತಿದ್ದರು. ಅವರೊಡನೆ ತಮ್ಮು 'ರೈಟರ್ ರೂಮ್' ಎಲ್ಲಿ?' ಎಂದು ವಿಚಾರಿಸಿದನು. 'ಅಲ್ಲಿದೆ. ಹೋಗಿ' ಎಂದು ಒಬ್ಬನು ಹೇಳಿದನು. 'ಎಲ್ಲಿ' ಎಂದು ಶಾಸ್ತ್ರಿಗಳಿಗೂ ತಿಳಿಯಲಿಲ್ಲ; ತಮ್ಮುವಿಗೂ ಗೊತ್ತಾಗಲಿಲ್ಲ. ಅವರು ಸುಮ್ಮನೆ ಅತ್ತಿತ್ತ ನೋಡುತ್ತ ನಿಂತರು.

ಅಷ್ಟರಲ್ಲಿ ಯಾರೋ ಒಬ್ಬರು ಬರುವುದು ಕಂಡಿತು. ಅವರು ಉದ್ದವಾದ ಅಂಗಿ ಹಾಕಿಕೊಂಡು, ಮುಂಡಾಸು ಇಟ್ಟಿದ್ದರು. ತಮ್ಮುವೂ, ಶಾಸ್ತ್ರಿಗಳೂ ಅವರನ್ನು ಉಪಾಧ್ಯಾಯರೆಂದು ಭಾವಿಸಿ, ಅವರ ಬಳಿಗೆ ಹೋಗಿ 'ಸ್ವಾಮಿ! ನಮಸ್ಕಾರ. ಇಲ್ಲಿ 'ರೈಟರರ ರೂಮ್ ಎಲ್ಲಿ?' ಎಂದು ಕೇಳಿದರು. 'ನಾನು ಇಲ್ಲಿಯ ಜವಾನ, ನನಗೆ ತಮ್ಮ ನಮಸ್ಕಾರ ಗಿಮಸ್ಕಾರಗಳ ಮರ್ಯಾದೆಯೊಂದೂ ಬೇಡ. ಅಗೋ! ಎದುರಿಗೆ ಕಾಣುವುದೇ ರೈಟರರ ರೂಮ್; ಅವರಿನ್ನೂ ಬಂದಿಲ್ಲ' ಎಂದನು.

ತಮ್ಮು ತಂದೆಯೊಡನೆ ಜಗುಲಿಯ ಮೇಲೆ ಹತ್ತಿದನು. ಹುಡುಗನು ತೋರಿದ ಕೋಣೆಯ ಕಡೆಗೆ ನಡೆದನು ('Writer's Room') 'ರೈಟರ್‌ರ ಕೋಣೆ' ಎಂದು ಬರೆದಿದ್ದ ಕಪ್ಪು ಹಲಗೆಯೊಂದು ಆ ಕೋಣೆಯ ಬಾಗಿಲ ಮೇಲ್ಗಡೆ ತೂಗಹಾಕಿತ್ತು. ಆದರೆ ಬಾಗಿಲು ತೆರೆದಿರಲಿಲ್ಲ;— ರೈಟರರು ಬಂದಿರಲಿಲ್ಲ. 'ಇದೇ ರೈಟರರ ಕೊಟ್ಟಡಿ, ಅವರಿನ್ನೂ ಬಂದಿಲ್ಲ' ಎಂದು ತಮ್ಮು ಹೇಳಿದನು. 'ಹಾಗಾದರೆ, ನಡೆ ಮುಂದಕ್ಕೆ; ಸುಮ್ಮನೇ ಇಲ್ಲಿ ನಿಂತು ಮಾಡುವುದೇನು? ಶಾಲೆಯನ್ನು ನೋಡುವ' ಎಂದು ಶಾಸ್ತ್ರಿಗಳು ಹೇಳಿದರು.

ತಂದೆ ಮಕ್ಕಳು ಒಂದೊಂದೇ ಕೋಣೆಯನ್ನು ನೋಡುತ್ತ ಬಂದರು. ಎಷ್ಟು ಕೊಟ್ಟಡಿಗಳು! ಒಂದೊಂದು ಕೊಟ್ಟಡಿಯೂ ಎಷ್ಟು ವಿಶಾಲ! ಅದರಲ್ಲಿ ಎಷ್ಟು ಬೆಂಚುಗಳು! ಶ್ರೀರಾಮಪುರದ ಚಿಕ್ಕ ಶಾಲೆಯು ಈ ಕಟ್ಟೋಣದ ಮುಂದೆ ಆನೆಯ ಇದಿರಿನ ಆಡಿನ ಹಾಗೆ. 'ಇದರ ಪರಿಚಯ ಮಾಡಿಕೊಳ್ಳಲಿಕ್ಕೇ ತಿಂಗಳು ಬೇಕು' ಎಂದು ಶಾಸ್ತ್ರಿಗಳು ಯೋಚಿಸಿದರು.

ಅಷ್ಟರಲ್ಲಿ ವಿದ್ಯಾರ್ಥಿಗಳು ತಂಡತಂಡವಾಗಿ ಶಾಲೆಗೆ ಬರಲು ಆರಂಭಿಸಿದ್ದರು. ರೈಟರರ ಕೊಟ್ಟಡಿಯ ಬಾಗಿಲೂ ತೆರೆದಿತ್ತು. ತಮ್ಮು ತಂದೆಯೊಡನೆ ಅಲ್ಲಿಗೆ ಬಂದನು.

'ರೈಟರರ' ಕೊಟ್ಟಡಿಯಲ್ಲಿ ಹುಡುಗರು 'ರೈಟರ'ರನ್ನು ಸುತ್ತುಹಾಕಿದ್ದರು. ಶಾಲೆ ನಿನ್ನೆ ತಾನೇ ತೆರೆದಿದ್ದುದರಿಂದ, ರೈಟರರಿಗೆ ಕೆಲಸ ವಿಶೇಷವಾಗಿತ್ತು. ಕೆಲವರು 'ಶಾಲಾ ಬಿಡುಗಡೆಯ ಸರ್ಟಿಫಿಕೇಟ್' ತೆಗೆದುಕೊಳ್ಳುವವರು ಕೆಲವರು 'ಶಾಲಾ ಪ್ರವೇಶದ ಎಪ್ಲಿಕೇಶನ್' ತೆಗೆದುಕೊಳ್ಳುವವರು. 'ಕಲೆಂಡರು' ಕೊಳ್ಳುವವರು ಕೆಲವರು. ಕೆಲವರು ಅದನ್ನು ಬರೆದುಕೊಡುವವರು. 'ಶಾಲಾ ಸಂಬಳ' ಕೊಡುವವರು ಕೆಲವರು. 'ಪುಸ್ತಕಭಂಡಾರದ ಪುಸ್ತಕ' ಬೇಕೆಂದು ಕೇಳುವವರು ಕೆಲವರು. 'ಸ್ಕೋಲರಶಿಪ್ಪಿ'ಗೆ ಅರ್ಜಿಫಾರ್ಮು ಕೇಳುವವರು ಹಲವರು ಇಷ್ಟು ಕೆಲಸವನ್ನೂ ಒಬ್ಬನೇ ಒಂದೇ ಸಮಯದಲ್ಲಿ ಹೇಗೆ ಮಾಡಬೇಕು? ರೈಟರರು ಸ್ವಭಾವತಃ ಒಳ್ಳೆಯವರಾದರೂ, ವಿಪರೀತ ಕೆಲಸದ ಸಮಯದಲ್ಲಿ ಅವರು ರೇಗಿಬೀಳುವುದಿತ್ತು. ಅವರು ರೇಗದಿದ್ದರೂ ಹುಡುಗರು ಅವರನ್ನು ರೇಗಿಸುವುದಿತ್ತು. ತಮ್ಮೂವೂ, ಶಾಸ್ತ್ರಿಗಳೂ ಈ ಗದ್ದಲದ ನಡುವೆಯೇ ರೈಟರರನ್ನು ಮಾತಾಡಿಸಿದರು. 'ಒಂದು ಎಪ್ಲಿಕೇಶನ್ ಬೇಕು' ಎಂದರು. ಹಲವು ಕೆಲಸಗಳಲ್ಲಿದ್ದ ರೈಟರರು 'ಸ್ವಲ್ಪ ನಿಲ್ಲಿ!' ಎಂದು ಗದರಿಸಿದರು. ಇವರು ಬಾಗಿಲಲ್ಲಿ ನಿಂತರು.

ಇದಿಷ್ಟರಲ್ಲಿ ಹೆಡ್‌ಮಾಸ್ಟರರು, ರೈಟರರ ಕೋಣೆಯನ್ನು ಹಾದು ಹೋಗುತಿದ್ದರು. ಶಾಸ್ತ್ರಿಗಳೂ ತಮ್ಮುವೂ ನಿಂತುದನ್ನು ಕಂಡು, ಯಾರೋ ಹೊಸಬರೆಂದು ತಿಳಿದು 'ಯಾವ ಊರಿನವರು? ಈ ಹುಡುಗನನ್ನು ಶಾಲೆಗೆ ಸೇರಿಸಲು ಕರೆದುಕೊಂಡು ಬಂದಿರೇ?' ಎಂದು ಕೇಳಿದರು.

ಶಾಸ್ತ್ರಿಗಳೂ, ತಮ್ಮುವೂ ಹೆಡ್ಮಾಸ್ಟರರಿಗೆ ನಮಸ್ಕಾರ ಮಾಡಿ, 'ನಾವು ಶ್ರೀರಾಮಪುರದವರು. ಇವನು ತಮ್ಮು; ನನ್ನ ಮಗ. 'ಲೋವರ್ ಸೆಕೆಂಡರಿ' ಪಾಸಾಗಿ ಮುಂದೆ ಓದಲಿಕ್ಕೆ ಬಂದಿದ್ದಾನೆ' ಎಂದು ಅರಿಕೆ

ಮಾಡಿಕೊಂಡರು. 'ಬಹುವಗಾನಪಟ್ಟ ಹುಡುಗ' ಎಂದು ನುಡಿದು ನಗುತ್ತ, ತಮ್ಮುವನ್ನು ಮುಂದಕ್ಕೆಳೆದರು. ತಮ್ಮು ಮತ್ತೂ ಹಿಂದೆ ಸರಿದನು.

ಹೆಡ್ಮಾಸ್ಟರರು 'ಸ್ಕೂಲ್ ಲೀವಿಂಗ್ ಸರ್ಟಿಫಿಕೇಟ್ ಇದೆಯೇ' ಎಂದು ಕೇಳಿದರು. 'ಉಂಟೆ'ಂದು ಶಾಸ್ತ್ರಿಗಳು ಹೇಳಿದರು. ಹೆಡ್ಮಾಸ್ಟರರು, ರೈಟರನ್ನು ಕರೆದು, 'ಅವರಿಗೊಂದು ಎಪ್ಲಿಕೇಶನ್ ಫಾರ್ಮು ಕೊಡು; ಅದನ್ನು ಒರೆಯಿಸು; ಅದರೊಂದಿಗೆ ಅವರನ್ನು ನನ್ನ ಕೊಟ್ಟಡಿಗೆ ಕರೆದುಕೊಂಡು ಬಾ!' ಎಂದು ರೈಟರರನ್ನು ಕರೆದು ಹೇಳಿದರು.

'ಆಪತ್ತಿನ ಮಧ್ಯೆ ಇದೊಂದು ಸಂಪತ್ತು. ಕೆಲಸದ ಗಲಾಟೆಯಲ್ಲಿ ನಾನು ಸಾಯುತ್ತೇನೆ. ಆ ನಡುವೆ ಹೆಡ್ಮಾಸ್ಟರರ ಅಪ್ಪಣೆ ಬೇರೆ' ಎಂದು ರೈಟರರು ದೊಡ್ಡ ಕಣ್ಣು ಮಾಡಿಕೊಂಡು ಶಾಸ್ತ್ರಿಗಳನ್ನು ನೋಡಿದನು. 'ಸ್ವಲ್ಪ ನಿಲ್ಲಿ' ಎಂದು ನಾನು ಹೇಳಿದ್ದು ಸಾಲಲಿಲ್ಲವೇ? ಅದಕ್ಕೆ ಹೆಡ್ಮಾಸ್ಟರರೊಡನೆ ದೂರು ಹೇಳಬೇಕಿತ್ತೇ?' ಎಂದು ಶಾಸ್ತ್ರಿಗಳನ್ನು ಜರೆದರು. ಶಾಸ್ತ್ರಿಗಳು ಕೈ ಮುಗಿದು, 'ನಾವೇನೂ ದೂರು ಹೇಳಲಿಲ್ಲ. ಅವರು ಯಾರೆಂಬುದೂ ನಮಗೆ ಗೊತ್ತಿಲ್ಲ!' ಎಂದು ವಿನಯದಿಂದ ಹೇಳಿಕೊಂಡರು. ರೈಟರರು ಆ ವಿನಯ, ಆ ನಮಸ್ಕಾರಗಳನ್ನು ಕಂಡು ಸುಪ್ರೀತರಾದರೋ ಹೇಗೋ ಗೊತ್ತಿಲ್ಲ. ಅಂತೂ 'ಇಗೊಳ್ಳಿ ಫಾರ್ಮು! ಬರೆದು ಕೊಡಿ' ಎಂದು 'ಎಪ್ಲಿಕೇಶನ್ ಫಾರ್ಮ'ನ್ನು ತಮ್ಮುವಿನ ಕೈಗೆ ಕೊಟ್ಟರು.

ತಮ್ಮು ತಂದೆಯೊಡನೆ ಅನೇಕ ಪ್ರಶ್ನೆಗಳನ್ನು ಕೇಳಿ, ಆ ಫಾರ್ಮನ್ನು ಬರೆದನು. ರೈಟರರ ಕಯ್ಯಲ್ಲಿ ಕೊಟ್ಟನು. ರೈಟರರು ಅದನ್ನು ಚೆನ್ನಾಗಿ ಪರೀಕ್ಷಿಸಿ 'ಸರಿಯಾಗಿದೆ; ಇಲ್ಲಿ ರಕ್ಷಕರ ದಸ್ಕತ್ತು' ಎಂದು ಶಾಸ್ತ್ರಿಗಳ ದಸ್ಕತು ಹಾಕಿಸಿದರು. 'ಬನ್ನಿ; ಹೆಡ್ಮಾಸ್ಟರರ ಕೊಟ್ಟಡಿಗೆ ಹೋಗುವ' ಎಂದು ಹೆಡ್ಮಾಸ್ಟರರ ಕೋಣೆಗೆ ಕರೆದುಕೊಂಡು ಹೋದರು.

---

## ಆರನೆಯ ಅಧ್ಯಾಯ.

### IV ಫಾರಂ.

ಹೆಡ್ಮಾಸ್ಟರರು ಕೊಟ್ಟಡಿಯಲ್ಲಿ ಚುಟ್ಟವನ್ನೆಳೆಯುತ್ತ ಏನನ್ನೋ ಬರೆಯುತ್ತ ಕುಳಿತಿದ್ದರು. ರೈಟರರು ಇವರನ್ನು ಆ ಕೊಟ್ಟಡಿಯಲ್ಲಿ ಬಿಟ್ಟು ಹೊರಟು ಹೋದರು. ಸ್ವಲ್ಪ ಹೊತ್ತಿನ ಮೇಲೆ, ಹೆಡ್ಮಾಸ್ಟರರು ತಲೆಯೆತ್ತಿ, 'ಎಪ್ಲಿಕೇಶನ್ ಫಾರ್ಮ್'ನ್ನು ತಮ್ಮುವಿನ ಕೈಯಿಂದ ತೆಗೆದುಕೊಂಡರು. 'ನೋಡಿ! ಎಷ್ಟೋ ಮಂದಿ ಹೆಡ್ಮಾಸ್ಟರರು 'ಮೂರನೇ ಫಾರ್ಮ್ ಪಾಸಾದ ವಿದ್ಯಾರ್ಥಿ'ಗಳೆಂದು 'ಸರ್ಟಿಫಿಕೇಟ್' ಕೊಟ್ಟು ನಮ್ಮಲ್ಲಿಗೆ ಕಳುಹಿಸಿ ಬಿಡುತ್ತಾರೆ. ಆದರೆ ಅನೇಕರು ನಾಲ್ಕನೇ ಫಾರ್ಮಿಗೆ ಸೇರುವ ಯೋಗ್ಯತೆಯುಳ್ಳವರಲ್ಲ; ಆದ್ದರಿಂದ ಈತನ ಪರೀಕ್ಷೆಯಾಗಬೇಕಾಗಿದೆ' ಎಂದು ತಮ್ಮುವಿನ ಕಡೆಗೆ ತಿರುಗಿ, ಅವನಿಗೆ ಮೇಜಿನ ಮೇಲಿದ್ದ ಒಂದು ಇಂಗ್ಲೀಷ್ ಪುಸ್ತಕದ ಒಂದು ಹಾಳೆಯನ್ನು ತೆಗೆದುಕೊಟ್ಟು 'ಓದು!' ಎಂದರು.

'ಪರೀಕ್ಷೆ' ಎಂದೊಡನೆ ತಮ್ಮು ಹೆದರಿ ಹೋದ. ಹೊಸ ಊರು, ಹೊಸ ಶಾಲೆ ಇವು ಮಾತ್ರವೇ ಅವನ ಮನಸ್ಸನ್ನು ಬೆದರಿಸಿದುದಲ್ಲ. ಸ್ಥೂಲಕಾಯರೂ, ಹೊಸಬರೂ ಆದ ಹೆಡ್ಮಾಸ್ಟರರು ಹೊಸದೊಂದು ಇಂಗ್ಲಿಷ್ ಪುಸ್ತಕ ಕೊಟ್ಟು 'ಓದು' ಎನ್ನುತಿದ್ದಾರೆ. ತಮ್ಮುಗೆ ದಿಕ್ಕು ತೋಚದೆ ಹೋಯಿತು. ಸಾಮಾನ್ಯ ಸ್ಥಿತಿಯಲ್ಲಿ ಅವನು ಏನೊಂದೂ ತಪ್ಪಿಲ್ಲದೆ ಓದುವಷ್ಟು ಆ ಹಾಳೆಯು ಸುಲಭವಾಗಿದ್ದರೂ, ತಮ್ಮು ಸರಸರನೆ ಓದಲಾರದೆ ಹೋದ. ಆ ಹಾಳೆಯ ಅಕ್ಷರಗಳೂ, ಪಂಕ್ತಿಗಳೂ ಅವನ ಕಣ್ಣ ಮುಂದೆ ಕುಣಿಯುವಂತೆ ಅವನಿಗೆ ಕಂಡಿತು. ಅವನು ಮೊದಲನೆಯ ಫಾರ್ಮಿನ ವಿದ್ಯಾರ್ಥಿಯ ಹಾಗೆ, ಎಡವುತ್ತ, ತಡವುತ್ತ ಓದಲು ಪ್ರಯತ್ನಿಸಿದ.

ಹೆಡ್ಮಾಸ್ಟರರು ರೈಟರರನ್ನು ಕರೆಯಿಸಿದರು. 'ಈ ಹುಡುಗನಿಗೆ ಇಂಗ್ಲಿಷ್ ಓದಲು ಬರುವುದಿಲ್ಲ. ನಾಲ್ಕನೆಯ ಫಾರ್ಮಿಗೆ ಈತನನ್ನು ಸೇರಿಸಲು ಅನುಕೂಲವಿಲ್ಲ. ಸಣ್ಣ ಪುಟ್ಟ ಊರಿನ 'ಲೋವರ್ ಸೆಕಂಡರಿ'ಯ ಶಿಕ್ಷಣವು ನಮ್ಮ 'ಸ್ಟೆಂಡಾರ್ಡಿಗೆ' ಸಾಲದು' ಎಂದರು.

ಹೆಡ್ಮಾಸ್ಟರರು ಇಂಗ್ಲಿಷಿನಲ್ಲಿ ಹೇಳಿದ ಈ ಮಾತುಗಳ ಅರ್ಥವು ತಮ್ಮಗೆ ಗೊತ್ತಾಯಿತು ತಾನು ಶ್ರೀರಾಮಪುರದಲ್ಲಿ ಒಂದನೆಯ ವಿದ್ಯಾರ್ಥಿಯಾಗಿ 'ಲೋವರ್ ಸೆಕೆಂಡರಿ'ಯಲ್ಲಿ ಪ್ಯಾಸಾಗಿ, ಆ ಸಂಬಂಧ ಶಾಲಾ ದಿನಾಚರಣೆಯ ಸಮಾರಂಭದಲ್ಲಿ ಅನೇಕ ಬಹುಮಾನಗಳನ್ನು ಪಡೆದೂ ಈಗ ನಾಲ್ಕನೆಯ 'ಫಾರ್ಮಿಗೆ' ಅಯೋಗ್ಯನೆಂದು ಇಲ್ಲಿಂದ ಹಿಂದಿರುಗಬೇಕೆ? – ಎಂದು ಅವನು ಬಹಳ ದುಃಖಪಟ್ಟನು. ನಾಚಿಕೆಗೊಂಡನು. ಕೊನೆಗೆ ಆದುದಾಗಲೆಂದು, ಧೈರ್ಯ ತಂದುಕೊಂಡು 'ನಾನು ನಾಲ್ಕನೆಯ 'ಫಾರ್ಮಿನಲ್ಲಿ' ಸರಿಯಾಗಿ ಕೆಲಸ ಮಾಡಬಲ್ಲೆನು' ಎಂದು ಇಂಗ್ಲಿಷಿನಲ್ಲಿ ಹೇಳಿದನು.

'ಹಾಗಾದರೆ ನಿನಗೆ ಇಂಗ್ಲೀಷ್ ಸರಿಯಾಗಿ ಬರುತ್ತದೆಯಲ್ಲವೇ? ನಾನು ರೈಟರರಿಗೆ ಹೇಳಿದ್ದೆಲ್ಲ ನಿನಗೆ ಗೊತ್ತಾಗಿರಬೇಕಲ್ಲವೇ? ಒಳ್ಳೆದಿರಲಿ!' ಎಂದು ಹೆಡ್ಮಾಸ್ಟರರು ರೈಟರರನ್ನು ಕರೆದು, 'ಪ್ರಾಯಶಃ ನನ್ನ ಇದಿರಲ್ಲಿ ಈತನು ಗಾಬರಿ ಬಿದ್ದನೇನೋ! ಇವನನ್ನು ನಾಲ್ಕನೆಯ ಫಾರ್ಮಿಗೆ ಕರೆದುಕೊಂಡು ಹೋಗು; ಆ ಕ್ಲಾಸು ಮಾಸ್ಟರರು ಇವನನ್ನು ಪರೀಕ್ಷಿಸುವಂತೆ ಹೇಳು- ಅದರ ಫಲಿತಾಂಶವು ಬೇಗನೇ ನನಗೆ ಗೊತ್ತಾಗಲಿ' ಎಂದರು.

'ದಿನವೆಲ್ಲ ನಿಮ್ಮನ್ನು ಕಟ್ಟಿಕೊಂಡು ತಿರುಗುವುದೇ ನನಗೆ ಕೆಲಸವಾಯ್ತು. ಅದಕ್ಕೇ ನಾನು 'ಸ್ವಲ್ಪ ತಾಳಿ' ಎಂದು ಆಗ ಹೇಳಿದುದು. ಹಾಗೆ ಮಾಡಿದ್ದರೆ ಪರೀಕ್ಷೆ ಇಲ್ಲದೆ ಸುದಾರಿಸಬಹುದಿತ್ತು ನನ್ನ ಮಾತು ನಿಮಗೆ ಸಾಲಲಿಲ್ಲ. ಹೆಡ್ಮಾಸ್ಟರರೊಡನೆ ದೂರು ಹೇಳಿದಿರಿ. ಅದರ ಫಲ ಈಗ ತಿನ್ನಿ!' ಎಂದು ರೈಟರರು ಜಬರಿಸಿದರು.

ಶಾಸ್ತ್ರಿಗಳು ಕೈ ಮುಗಿದು 'ಸ್ವಾಮಿ! ನಾವು ಈ ಊರಿಗೆ ಹೊಸಬರು; ನಮಗೆ ಒಂದೂ ಗೊತ್ತಿಲ್ಲ. ಅವರು ನಮ್ಮೊಡನೆ ವಿಚಾರಿಸಿದರೆಂದು ಅವರೊಡನೆ, ಮಾತಾಡಿದ್ದೇ ತಪ್ಪೇ? ದಯೆಮಾಡಿ ಕ್ಷಮಿಸಿ. ನಾವೀಗ ಹೇಗೆ ನಡೆದುಕೊಳ್ಳಬೇಕೋ ಅಪ್ಪಣೆಯಾಗಲಿ!' ಎಂದು ಅರಿಕೆ ಮಾಡಿಕೊಂಡರು.

'ಬನ್ನಿ! ಎಲ್ಲ ಮಾಡುವ' ಎಂದು ರೈಟರರು ನಾಲ್ಕನೆಯ ಫಾರ್ಮಿಗೆ ಬಂದು, ಅಲ್ಲಿನ ಉಪಾಧ್ಯಾಯರೊಡನೆ ಹೆಡ್ಮಾಸ್ಟರರ ಅಪ್ಪಣೆಯನ್ನು ತಿಳುಹಿಸಿ ಹೊರಟುಹೋದರು.

ಒಂದು ಗಂಟೆಗೆ ನಾಲ್ಕನೆಯ ಫಾರ್ಮಿನ ಮಾಸ್ಟರರು, ತಮ್ಮುವನ್ನೂ, ಶಾಸ್ತ್ರಿಗಳನ್ನೂ ಹಿಂದಿಟ್ಟುಕೊಂಡು, ಹೆಡ್ಮಾಸ್ಟರರ ಕೊಟ್ಟಡಿಗೆ ಬಂದರು. 'ಹುಡುಗನನ್ನು ಪರೀಕ್ಷಿಸಿದೆ. ಸರ್! ಹುಡುಗ ಎಲ್ಲ ವಿಷಯಗಳಲ್ಲಿಯೂ ಸಮರ್ಥನೇ. ಅವನ ಉತ್ತರದ ಪತ್ರಗಳು ಇಲ್ಲಿವೆ. ೮ ಲೆಕ್ಕಗಳಲ್ಲಿ ೬ ಸರಿಯಾಗಿ ಮಾಡಿದ್ದಾನೆ. ಪ್ರಬಂಧವು ತೃಪ್ತಿಕರ' ಎಂದು ಹೇಳಿದರು.

'ಹಾಗಾದರೆ ಈತನು ನನ್ನ ಪರೀಕ್ಷೆಯಲ್ಲಿ ಹೆದರಿದುದೇ ನಿಜ. ಹುಡುಗಾ! ನನ್ನನ್ನು ಕಂಡು ನೀನು ಹೆದರಬೇಕಾಗಿಲ್ಲ. ನಾನು ನಿನ್ನನ್ನೇನೂ ತಿನ್ನುವುದಿಲ್ಲ' ಎಂದು ಹೆಡ್ಮಾಸ್ಟರರು ಅವನ ಕೈಯಿಂದ 'ಎಪ್ಲಿಕೇಶನ್ ಫಾರ್ಮ'ನ್ನು ತೆಗೆದುಕೊಂಡು ಅದಕ್ಕೆ ರುಜು ಹಾಕಿದರು. 'ರೈಟರರಿಗೆ ಈ ಫಾರ್ಮನ್ನೂ, ಸ್ಕೂಲ್ ಫೀಸನ್ನೂ ಕೊಡಿ; ಹೋಗಿ' ಎಂದು ಹೇಳಿದರು.

ಶಾಸ್ತ್ರಿಗಳು ರೈಟರರೊಡನೆ ಫಾರ್ಮನ್ನೂ, ಫೀಸನ್ನೂ ಕೊಟ್ಟರು. ತಮ್ಮುವಿನ ಹೆಸರು ದಾಖಲಾಯಿತು. ಉಪಾಧ್ಯಾಯರನ್ನು ಕೇಳಿ ಪುಸ್ತಕದ ಪಟ್ಟಿ ಕೆಲೆಂಡರಿನಲ್ಲಿ ನೋಡಿಕೊಂಡದ್ದಾಯಿತು. ತಮ್ಮು ಈಗ ಶ್ರೀರಾಮಪುರದ ಲೋವರ್ ಸೆಕಂಡರಿ ವಿದ್ಯಾರ್ಥಿಯಲ್ಲ; ಶಿವರಾಜಪುರದ 'ನೇಟಿವ್ ಹ್ಯಾಸ್ಕೂಲಿನ' ನಾಲ್ಕನೆಯ ಫಾರ್ಮು ವಿದ್ಯಾರ್ಥಿ!

ಮಧ್ಯಾಹ್ನದ ಮೇಲೆ ಶಾಸ್ತ್ರಿಗಳೂ, ತಮ್ಮುವೂ ಅಂಗಡಿಬೀದಿಗೆ ಹೊರಟರು. ಅವರಿಗೆ ಪುಸ್ತಕಗಳನ್ನೂ, ದೀಪವನ್ನೂ, ಕೊಡೆಯನ್ನೂ ಕೊಳ್ಳಬೇಕಾಗಿತ್ತು. ಶಿವರಾಜಪುರದ ಅಂಗಡಿಬೀದಿಗಳೆಂದರೆ, ಶ್ರೀರಾಮಪುರದಂತೆ, ಒಂದೆರಡಲ್ಲ; ಹಲವು. ಈ ಹಲವು ಹದಿನೆಂಟು ಬೀದಿಗಳು ಹೊಸಬರಾದವರ ಕಣ್ಣು ಕಟ್ಟುತ್ತಿತ್ತು. ಎಲ್ಲಿಗೆ ಬಂದೆ, ಇನ್ನೆಲ್ಲಿಗೆ ಹೋಗಬೇಕು, ಬಂದ ದಾರಿ ಯಾವುದು, ಇನ್ನು ಹೋಗಬೇಕಾದ ದಾರಿ

ಯಾವುದು — ಎಂಬುದೊಂದೂ ಆ ತಂದೆ ಮಕ್ಕಳಿಗೆ ತಿಳಿಯಲಿಲ್ಲ. ಅವರು ತಮಗೆ ಬೇಕಾದ ಅಂಗಡಿಗಳನ್ನು ಹುಡುಕುತ್ತಾ, ವಿಚಾರಿಸುತ್ತಾ ಅಲ್ಲಿ ಇಲ್ಲಿ ಸುಮ್ಮನೆ ಸುತ್ತಿದರು. ಮೈಲಿನೊಳಗೇ ಆಗಬಹುದಾಗಿದ್ದ ಕೆಲಸಕ್ಕೆ ನಾಲ್ಕು ಮೈಲು ಸುತ್ತಿದರು. ಕೊನೆಗೆ ತಮ್ಮ 'ಇದೇ ಆ ಪುಸ್ತಕದ ಅಂಗಡಿ; 'ಮಹಾವೀರ ಪುಸ್ತಕಾಲಯ'ವೆಂದು 'ಬೋರ್ಡ್' ಹಾಕಿದೆ. ಎಂದನು.

'ನಾಲ್ಕು ಅಂಗಡಿಗಳನ್ನು ವಿಚಾರಿಸಿಕೊಳ್ಳುವುದು ಒಳ್ಳೇದಲ್ಲವೇ? ಎಲ್ಲಿ ಅಗ್ಗಕ್ಕೆ ಸಿಕ್ಕಿತೋ ಅಲ್ಲಿ ತೆಗೆದುಕೊಳ್ಳುವ' ಎಂದು ಶಾಸ್ತ್ರಿಗಳು ಹೇಳಿದರು.

'ಬೇಡ. ಉಪಾಧ್ಯಾಯರು ಇಲ್ಲಿಂದಲೇ ತೆಗೆದುಕೋ ಎಂದು ಹೆಸರು ಬರೆದು ಕೊಟ್ಟಿದ್ದಾರೆ. ಈ ಅಂಗಡಿಗಾರನು ನಮ್ಮ ಮೇಸ್ಟರರ ಭಾವಮೈದುನನಂತೆ. ಆದುದರಿಂದಲೇ, ಹಿಂದೆ ನೋಡಿದ ಪುಸ್ತಕದ ಅಂಗಡಿಗೆ ನಾನು ಹೋಗಲಿಲ್ಲ' ಎಂದನು.

ಅಂಗಡಿಗೆ ಹೊಕ್ಕು, ಪುಸ್ತಕದ ಪಟ್ಟಿಯನ್ನು ಅಂಗಡಿಯವನ ಕೈಗೆ ಕೊಟ್ಟದ್ದಾಯಿತು. ಬೇಕಾದ ಎಲ್ಲ ಪುಸ್ತಕಗಳೂ ಅಲ್ಲಿ ಇದ್ದಿಲ್ಲ. ಇದ್ದ ಪುಸ್ತಕಗಳನ್ನು ಕಟ್ಟಿಕೊಟ್ಟು 'ಮಿಕ್ಕ ಪುಸ್ತಕಗಳು ನಾಳೆ' ಎಂದಾಯಿತು. ಶಾಸ್ತ್ರಿಗಳು, ಪುಸ್ತಕದ ಬೆಲೆ ಕೊಡುವಾಗ, ತಮ್ಮನ ಮುಖ ನೋಡುತ್ತ, 'ನಿನ್ನ ಹೋದ ವರ್ಷದ ಶಾಲಾ ಸಂಬಳಕ್ಕಿಂತಲೂ ಈ ಪುಸ್ತಕಗಳ ಬೆಲೆ ಹೆಚ್ಚಾಯಿತಲ್ಲ!' ಎಂದರು.

ತಮ್ಮ 'ಇದು ಹ್ಯಾಸ್ಕೂಲು; ಅದು ಲೋವರ್ ಸೆಕೆಂಡರಿ' ಎಂದನು.

ಅನಂತರ ಅವರು ಸುತ್ತುತ್ತಾ, ತಿರುಗುತ್ತಾ 'ಕೊಡೆ-ದೀಪ' ಮೊದಲಾದ ನಾನಾ ಸಾಮುಗ್ರಿಗಳನ್ನು ಇಟ್ಟಿದ್ದ ಒಂದು ಅಂಗಡಿಗೆ ಬಂದರು. ಅಷ್ಟರಲ್ಲಿ ಅವರು ನಡೆದು, ನಡೆದು ಬೇಸರಗೊಂಡಿದ್ದರು. 'ನಾಲ್ಕು

ಅಂಗಡಿ ತಿರುಗಿ ವಿಚಾರಿಸಿ, ಚೌಕಶಿ ಮಾಡಿ ವ್ಯಾಪಾರಮಾಡಬೇಕೆನ್ನುವ ತವಕವು ಶಾಸ್ತ್ರಿಗಳಿಗೆ ಈಗ ಆರಿಹೋಗಿತ್ತು. ಅದೇ ಅವರು ಮಗನಿಗೆ 'ಇಲ್ಲಿಯೇ ಅವುಗಳನ್ನು ಖರೀದಿ ಮಾಡಿಬಿಡುವ' ಎಂದು ಒಂದೇ ಮಾತು ಗುಟ್ಟಾಗಿ ಹೇಳಿದರು. ಅಂಗಡಿಯವನು ಇವರು ಹೊಸಬರೆಂದೂ, ಹಳ್ಳಿಯ ಮುಕ್ಕರೆಂದೂ ಇವರನ್ನು ನೋಡಿದೊಡನೆಯೇ ತಿಳಿದವನಾಗಿ, ಒಂದಕ್ಕೆರಡು ಬೆಲೆಯನ್ನು ಇವರಿಂದ ವಸೂಲ್ಮಾಡಿದ. ಹಳೆಯ ಸಾಮಾನುಗಳನ್ನೇ ಇವರ ತಲೆಗೆ ಹಾಕಿದ.

ಶಾಸ್ತ್ರಿಗಳಿಗೂ, ತಮ್ಮುವಿಗೂ, ಶ್ಯಾಮಭಟ್ಟರ ಹೋಟಲನ್ನು ಪುನಃ ಕಂಡುಹಿಡಿಯಲು ಬಹಳ ಹೊತ್ತು ಹಿಡಿಯಿತು. ಬಹಳ ಶ್ರಮವೂ ಆಯಿತು. ಇವರು 'ಹೋಟಲು' ವಿಚಾರಿಸುತ್ತ ಬರುವಾಗ, ಯಾರೋ ಕಾಕಪೋಕರು, ಇವರಿಗೆ ತಪ್ಪು ಹಾದಿಯನ್ನು ತೋರಿಸಿಕೊಟ್ಟುದೇ ಅದಕ್ಕೆ ಕಾರಣ.

---

## ಏಳನೆಯ ಅಧ್ಯಾಯ.

## ರಾಮರಾಯನ ಕುಚೋದ್ಯ.

ಆ ರಾತ್ರಿಯೇ ಶಾಸ್ತ್ರಿಗಳು ಊರಿಗೆ ಹೊರಡಲು ಸಿದ್ಧರಾದರು. ಹುಡುಗನ ಯೋಗಕ್ಷೇಮವನ್ನು ಶ್ಯಾಮಭಟ್ಟರ ಕೈಗೆ ಒಪ್ಪಿಸಿ, ಊಟತಿಂಡಿಗೂ ಅಲ್ಲಿಯೇ ಏರ್ಪಡಿಸಿದರು. 'ತಮ್ಮೂ! ನೋಡಿಕೋ! ಜೋಕೆ! ನಾನೇನೋ ಸಾಲಮೂಲ ಮಾಡಿ ನಿನಗೆ ವಿದ್ಯೆ ಕಲಿಸಲು ಹೊರಟಿದ್ದೇನೆ. ನೀನು ಕಷ್ಟಪಟ್ಟು ಓದಬೇಕು. ಕಡಿಮೆ ವೆಚ್ಚಮಾಡಬೇಕು. ನೀನು ನಿನಗೋಸ್ಕರವೇ ಕಷ್ಟಪಟ್ಟು ಓದಿ ಪರೀಕ್ಷೆ ಪಾಸು ಮಾಡುವುದಲ್ಲ. ನನಗೋಸ್ಕರ; ನಿನ್ನ ತಾಯಿಗೋಸ್ಕರ; ಇಡೀ ಕುಟುಂಬಕ್ಕೋಸ್ಕರ! ನಮ್ಮ ಸಂಸಾರದ ಭವಿಷ್ಯವೆಲ್ಲ ನಿನ್ನ ಒಬ್ಬನ ಮೇಲೆಯೇ ಹೊಂದಿಕೊಂಡಿದೆ. ನೀನು ಪ್ಯಾಸ್ ಮಾಡಿ ಸಂಪಾದಿಸಲು ಶಕ್ತನಾದರೆ, ನಮಗೆ ಒಂದು ಹಿಡಿ

ಅನ್ನ; ಅಲ್ಲದಿದ್ದರೆ, ಈಗ ಇರುವ ಅನ್ನದ ಬಾಯಿಗೂ ಮಣ್ಣೇ!' ಎಂದು ಹೇಳುತ್ತ, ಗಾಡಿ ಹತ್ತಿದರು. ತಮ್ಮು ಉತ್ತರ ಹೇಳಲಿಲ್ಲ. ಸಮ್ಮತಿ ಯನ್ನು ಸೂಚಿಸಲಿಕ್ಕಾಗಿ ತಲೆಯಲ್ಲಾಡಿಸಿದನು. ಗಾಡಿ ಹೊರಟಿತು.

ತಮ್ಮು ಮರುದಿನ ಉಷಃಕಾಲಕ್ಕೆ ಸರಿಯಾಗಿ ಎದ್ದು, ಸಮೀಪ ದಲ್ಲಿದ್ದ ದೇವಸ್ಥಾನದ ಕೆರೆಯಲ್ಲಿ ಮಿಂದನು. ದೇವಸ್ಥಾನಕ್ಕೆ ಹೋಗಿ, ದೇವರಿಗೆ ಅಡ್ಡಬಿದ್ದು, ಹೋಟೆಲಿಗೆ ಮರಳಿ ಬಂದನು. ಹಿಂದಿನ ದಿನದ ಪಾಠ ವನ್ನೆಲ್ಲ ಅವನು ರಾತ್ರಿಯೇ ಓದಿ ಗಟ್ಟಿಮಾಡಿಟ್ಟಿದ್ದನು. ಈಗ ಅದನ್ನೇ ಒಮ್ಮೆ ಮೇಲಿಂದ ಮೇಲೆ ಮಗಚುತ್ತ ಬಂದನು. ಶಾಲೆಗೆ ತಡವಾಗಬಾರ ದೆಂದು, ಹೊತ್ತಿಗೆ ಮುಂಚೆಯೇ ಶಾಲೆಗೆ ಹೊರಟು ಬಂದನು. ಶಾಲೆಯು ಹೊತ್ತಿಗೆ ಇನ್ನೂ ಮುಕ್ಕಾಲು ಗಂಟೆ ಇತ್ತು. ಹುಡುಗರು ಯಾರೂ ಬಂದಿರಲಿಲ್ಲ. ಬಾಗಿಲು ತೆರೆದಿರಲಿಲ್ಲ. ತಮ್ಮು ಒಬ್ಬನೇ ಶಾಲೆಯ ಜಗು ಲಿಯ ಮೇಲೆ ಅತ್ತಿತ್ತ ತಿರುಗಾಡುತಿದ್ದನು. ಯಾರಾದರೂ ಹುಡುಗರು ಬರುವರೋ ಎಂದು ಆತುರದಿಂದ ಕಾದುಕೊಂಡಿದ್ದನು.

ಅಷ್ಟರಲ್ಲಿ ರಾಮರಾವ್ ಎಂಬ ವಿದ್ಯಾರ್ಥಿಯೊಬ್ಬನು ಅಲ್ಲಿಗೆ ಬಂದನು. ಅವನು ಶ್ರೀಮಂತರ ಮಗ. ಅವನಿಗೆ 23 ವರ್ಷ. ಅವನು ಆರನೆಯ ಫಾರ್ಮಿನಲ್ಲಿ ಓದುತಿದ್ದನು. ಅವನು ಓದುವುದರಲ್ಲಿ ಹಿಂದೆ; ತಂಟೆಯಲ್ಲಿಯೂ, ತಮಾಷೆಯಲ್ಲಿಯೂ ಮುಂದೆ. ಅವನ ತಂದೆ ಮಗನ ವಿದ್ಯಾಭ್ಯಾಸವನ್ನು ಕುರಿತು ಏನೊಂದೂ ಗಣ್ಯಮಾಡುತಿದ್ದಿಲ್ಲ. ಅವನ ವಿದ್ಯಾ ಭ್ಯಾಸವನ್ನು ಅವನೇ ನೋಡಿಕೊಳ್ಳಲೆಂದು ಅವನ ಪಾಡಿಗೆ ಅವನನ್ನು ಬಿಟ್ಟು ಬಿಟ್ಟಿದ್ದನು. ಎಲ್ಲ ಹುಡುಗರಂತೆ ಇವನಿಗೂ ಓದುತ್ತಾನೆಂಬ ಹೆಸರಿರುವಂತೆ ಶಾಲೆಗೆ ಕಳುಹುತಿದ್ದನು. ಫೀಸ್ ತೆರುತಿದ್ದನು. ಪುಸ್ತಕ ಬಟ್ಟೆಗಳಿಗೆ ದುಡ್ಡು ಕೊಡುತಿದ್ದನು. ಅದರಂತೆ ರಾಮರಾಯನಾದರೂ, 'ಅಂಕೆ ಇಲ್ಲದ ಕಪಿ ಲಂಕೆ ಸುಟ್ಟಿತೆ'ಂಬಂತೆ ತನ್ನ ವಿದ್ಯಾಭ್ಯಾಸವನ್ನು ತಾನೇ ನೋಡಿ ಕೊಳ್ಳುತ್ತ, 3-4 ವರ್ಷಗಳಿಗೊಮ್ಮೆ ಒಂದೊಂದು ಹೊಸ ತರಗತಿಗೆ ಏರುತ್ತ, ಆರನೆಯ ಕ್ಲಾಸಿಗೆ ಬರುವುದರೊಳಗಾಗಿ ಚಿಗುರು ಮೀಸೆಯ 'ಅಲಂಕಾರ

ವಿದ್ಯಾರ್ಥಿ'ಯಾದನು. ಚೆನ್ನಾಗಿ ತಿಂದು ಉಂಡು, ನಿಶ್ಚಿಂತೆಯಿಂದ ಬೆಳೆದ ಆ ರಾಮರಾಯನನ್ನು ನೋಡಿದರೆ ಯಾರೂ ವಿದ್ಯಾರ್ಥಿ ಎನ್ನುವಂತಿರಲಿಲ್ಲ; ಉಪಾಧ್ಯಾಯನ ಹಾಗಿದ್ದ.

ಅಂಥ ರಾಮರಾಯನೇ ಈಗ ತಮ್ಮುವಿಗೆ ಗಂಟುಬಿದ್ದನು. ತಮ್ಮು ಹೊಸಬನೆಂದೂ, ಹಳ್ಳಿಯ ಹೆಡ್ಡನೆಂದೂ ಕ್ಷಣಮಾತ್ರದಲ್ಲಿ ಊಹಿಸಿ, ರಾಮ ರಾಯ ಕೇಳಿದನು:—'ನಿನ್ನ ಹೆಸರೇನು?'

'ತಮ್ಮು ಶಾಸ್ತ್ರಿ' ಸರ್' ಎಂದು ತಮ್ಮು ಮರ್ಯಾದೆಯಿಂದ ಉತ್ತರ ಕೊಟ್ಟ.

'ಸರ್' ಎಂಬ ಶಬ್ದವನ್ನು ಕೇಳಿ, ಹುಡುಗ ತನ್ನ ಬಲೆಯಲ್ಲಿ ಬಿದ್ದ; ತನ್ನ ಬೇಳೆ ಬೇಯಿತು. ಇನ್ನು ಅವನು ತಿಳಿದುಕೊಂಡಿರುವಂತೆ ತಾನು ಉಪಾಧ್ಯಾಯನಂತೆಯೇ ನಟಿಸಿ ಇವನಿಗೇನಾದರೂ ಕಿರುಕುಳ ಮಾಡ ಬೇಕು;—ಎಂದು ರಾಮರಾಯ ಆಲೋಚಿಸಿ, 'ನೀನು ಇಷ್ಟು ದಿನ ಎಲ್ಲಿ ಓದಿಕೊಂಡಿದ್ದೆ?' ಎಂದು ಕೇಳಿದನು

**ತಮ್ಮು:**—'ಶ್ರೀರಾಮಪುರದ ಲೋವರ್ ಸೆಕಂಡರಿ ಶಾಲೆಯಲ್ಲಿ ಸಾರ್!'

**ರಾಮು:**—ನಿಮ್ಮ ಹೆಡ್ಮಾಸ್ಟರರು ಯಾರು?

**ತಮ್ಮು:**—'ಸುಬ್ಬರಾಯರು'.

'ಆಹಾ! ನೀನೋ! ನಿನ್ನ ಹೆಡ್‌ಮಾಸ್ಟರರೋ! ಒಳ್ಳೇ ಬುದ್ಧಿ ಕಲಿಸಿ ಕೊಟ್ಟಿದ್ದಾರೆ ಹುಡುಗರಿಗೆ—ನಿಮ್ಮ ಹೆಡ್‌ಮಾಸ್ಟರರು. ಹೊತ್ತಿಗೆ ಮುಂಚೆ ಶಾಲೆಗೆ ಬಂದು ಅಲೆದುಕೊಳ್ಳಲಿಕ್ಕೆ! ಓದು ಬೇಡ. ಬರಹ ಬೇಡ!' ಎಂದು ರಾಮರಾಯ ತಿರಸ್ಕರಿಸಿ ಮಾತಾಡಿದ.

ತಮ್ಮುವಿನ ಮುಖ ಇಳಿದುಹೋಯಿತು. ಹೆಡ್ಮಾಸ್ಟರರ ಮೇಲಿನ ಕಾರಣವಿಲ್ಲದ ದೂಷಣೆಯನ್ನು ಕೇಳಿ ಅವನಿಗೆ ತುಂಬ ವಿಷಾದವಾಯಿತು. ಅಲ್ಲ ಸರ್, ನಮ್ಮ ಹೆಡ್ಮಾಸ್ಟರರು ತುಂಬ ಸಮರ್ಥರು; ಒಳ್ಳೆಯವರು'

ಎಂದನು. ರಾಮರಾಯನು 'ನೀನೇ ಹೊಗಳಬೇಕು ನಿಮ್ಮ ಹೆಡ್ಮಾಸ್ಟರ ರನ್ನು! ಮೇಸ್ಟರರ ಯೋಗ್ಯತೆ ತಿಳಿಯಲಿಕ್ಕೆ ಅವರ ಶಿಷ್ಯರೇ ಸಾಲದೇ? ಅಲೆದುಕೊಳ್ಳಲಿಕ್ಕೆ ಕಲಿಸಿಕೊಟ್ಟ ಮೇಸ್ಟರರು ಎಷ್ಟು ಗಟ್ಟಿಗರೋ! ಇಲ್ಲಿ ಬಾ, ಇಲ್ಲಿ. ಈ ತಪ್ಪನ್ನು ನಾನು ಸುಮ್ಮನೆ ಬಿಡಲಾರೆ' ಎನ್ನುತ್ತ, 'ಫಲಾ ಹಾರದ ಕೊಟ್ಟಡಿ'ಯೊಳಗೆ ತಮ್ಮುವನ್ನು ಹೋಗಲು ಹೇಳಿದ. 'ಇಲ್ಲಿ ಕುಳಿತುಕೋ. ನಾನು ಹೇಳುವುದನ್ನು 500 ಸಾರಿ ಬರೆ. 'ಇನ್ನು ಅಲೆಯು ವುದಿಲ್ಲ' ಎಂದು 500 ಸಾರಿ. ಹಾಗೆ ಬರೆಯದೆ ಇಲ್ಲಿಂದ ಏಳಕೂಡದು, ತಿಳಿಯಿತೇ?' ಎಂದು ಅಪ್ಪಣೆ ಮಾಡಿದನು. 'ಬೆಕ್ಕಿಗೆ ಆಟ; ಇಲಿಗೆ ಪ್ರಾಣ ಸಂಕಟವೆ'ಂಬುದು ಇಲ್ಲಿಗೆ ಸರಿ ಹೋಯಿತು.

ಪಾಪ, ತಮ್ಮು! ಮೇಸ್ಟರು ಹೇಳಿದಂತೆ, 'ಇನ್ನು ಅಲೆಯುವುದಿಲ್ಲ' ಎಂದು ಬರೆಯಲು ಆರಂಭಿಸಿದನು. ಇತ್ತ ಗಂಟೆ ಬಾರಿಸಿತು. ಒಂದಲ್ಲ; ಎರಡು ಸಲ! ಶಾಲೆ ಪ್ರಾರಂಭವಾಯಿತು. ಪಾಠಗಳು ಉಪಕ್ರಮವಾದುವು. ತಮ್ಮು ಒಟ್ಟಿಗೆ ಸಂಶಯದಲ್ಲಿ ಬಿದ್ದ. ಮೇಸ್ಟರರ ಅಪ್ಪಣೆಯಂತೆ 500 ಸಲ ಬರೆದು ಪೂರೈಸಬೇಕೇ? ಅಥವಾ ಕ್ಲಾಸಿಗೆ ಹೋಗಬೇಕೇ? ಇದನ್ನು ತಿಳಿ ಯದೆ ಪೇಚಾಡುತಿದ್ದ. ಅಷ್ಟರಲ್ಲಿ ರಾಮರಾಯನು ಅಲ್ಲಿಗೆ ಬಂದು, 'ಏನು? ಇನ್ನೂ ಫಲಾಹಾರದ ಕೋಣೆಯಲ್ಲಿಯೇ ಅಲೆದಾಡುತಿದ್ದೀಯಾ? ಕ್ಲಾಸಿಗೆ ಹೋಗಿಲ್ಲವೇ? ಎಂಥಾ ಅವಿವೇಕಿ! ನಾನೆಲ್ಲಿಯೂ ಕಾಣೆ. ಯಾವ ಕ್ಲಾಸು ನಿನ್ನದು?' ಎಂದು ಕೇಳಿದನು.

'ನಾಲ್ಕನೆಯ ಫಾರ್ಮ್, ಸರ್!' ಎಂದು ತಮ್ಮು ಹೇಳಿದ.

'ಹಾಗಾದರೆ, ಹೀಗೆ ಬಾ!' ಎಂದು ರಾಮರಾಯನು ತಮ್ಮುವನ್ನು 6ನೇ ಫಾರ್ಮಿನ ಬಳಿಗೆ ಕರೆದುಕೊಂಡು ಬಂದು, 'ನೀನು ಕ್ಲಾಸಿಗೆ ತಡವಾಗಿ ಬಂದೆ: ಆ ತಪ್ಪಿಗಾಗಿ ನೀನು ಕ್ಲಾಸಿನ ಹಿಂಬಾಗಲಿನಿಂದ ಕ್ಲಾಸಿನೊಳಗೆ ಹೊಕ್ಕು, ಬೆಂಚಿನ ಮೇಲೆ ನಿಲ್ಲಬೇಕು. 'ಗುಡ್ ಮಾರ್ನಿಂಗ್ ಸರ್' ಎಂದು ಹೇಳಬೇಕು. ಅದು ನಮ್ಮ ಶಾಲೆಯ 'ರೂಲು' ತಿಳಿಯಿತೇ?

ಹೋಗು, ಹಾಗೆ ಮಾಡು! ಇಲ್ಲದಿದ್ದರೆ ನಿನಗೆ ದಂಡನೆ ಬೇರೆ ಉಂಟು' ಎಂದು ಹೇಳಿದನು.

ತಮ್ಮು ಹಾಗೆಯೇ ಕ್ಲಾಸಿನ ಹಿಂದಿನ ಬಾಗಿಲಿಂದ ಮೆಲ್ಲನೆ ಒಳಗೆ ಬಂದ. ಆಗ ಉಪಾಧ್ಯಾಯರು ಬೋರ್ಡಿನ ಮೇಲೆ ಏನನ್ನೋ ಬರೆಯುತಿದ್ದರು. ವಿದ್ಯಾರ್ಥಿಗಳು ಅದನ್ನು ತಮ್ಮ ತಮ್ಮ ಪುಸ್ತಕಗಳಲ್ಲಿ ಬರೆದಿಟ್ಟು ಕೊಳ್ಳುತಿದ್ದರು. ತಮ್ಮು ಬಂದುದನ್ನು ಯಾರೂ ನೋಡಲಿಲ್ಲ. ತಮ್ಮು ಒಳಹೊಕ್ಕವನೇ, ಒಂದು ಬೆಂಚಿನ ಮೇಲೆ ನಿಂತು ಕಣ್ಣೀರು ಸುರಿಸುತ್ತ 'ಗುಡ್, ಮಾರ್ನಿಂಗ್, ಸರ್' ಎಂದು ಕೂಗಿದನು. ಎಲ್ಲರೂ ತಿರುಗಿ ನೋಡಿದರು,—ಸಣ್ಣ ಹುಡುಗನೊಬ್ಬನು ಬೆಂಚಿನ ಮೇಲೆ ನಿಂತಿದ್ದಾನೆ!

'ಗುಡ್ ಮಾರ್ನಿಂಗ್!' ಇದೇನು, ಹುಡುಗಾ, ಇಲ್ಲಿ ಏನು ಮಾಡುತ್ತಿರುವೆ?' ಎಂದು ಉಪಾಧ್ಯಾಯರು ಕೇಳಿದರು.

'ನಾನು ಕ್ಲಾಸಿಗೆ ತಡವಾಗಿ ಬಂದೆ—ದಯವಿಟ್ಟು ಕ್ಷಮಿಸಿ' ಎಂದು ತಮ್ಮು ಹೇಳಿದ.

ಹುಡುಗರೆಲ್ಲರೂ ಗೊಳ್ಳೆಂದು ನಕ್ಕರು. ಉಪಾಧ್ಯಾಯರಿಗೂ ನಗು ಬರುವ ಹಾಗಾಯ್ತು. ಆದರೂ ನಗುವನ್ನು ಅಡಗಿಸಿಕೊಂಡು, ಹುಡುಗರ ಬಾಯನ್ನೂ ಮುಚ್ಚಿಸಿದರು. 'ಪಾಪ, ಇವನು ಯಾವನೋ ಹೊಸ ಹುಡುಗ; 'ಕ್ಲಾಸ್' ತಪ್ಪಿ, ಇಲ್ಲಿಗೆ ಬಂದಿರಬೇಕೆ'ಂದು, ತಮ್ಮ ವಿದ್ಯಾರ್ಥಿಗಳಲ್ಲಿ ಒಬ್ಬನನ್ನು ಕರೆದು, 'ಈತನನ್ನು ಅವನ ಕ್ಲಾಸಿಗೆ ಬಿಟ್ಟು ಬಾ!' ಎಂದು ಹೇಳಿದರು. ತಮ್ಮು ಆ ಹುಡುಗನೊಟ್ಟಿಗೆ ತನ್ನ ಕ್ಲಾಸಿಗೆ ಹೋದನು.

ತಮ್ಮು ಕ್ಲಾಸಿನೊಳಗೆ ಕಾಲಿಡುವುದನ್ನು ಕಂಡು, ಹುಡುಗರು ಮೆತ್ತಗೆ ನಗುತ್ತಿದ್ದರು. ಆದರೆ ಉಪಾಧ್ಯಾಯರು—ಹಿಂದಿನ ದಿನ ಅವನನ್ನು ಪರೀಕ್ಷಿಸಿದವರು,—ಅವನಿಂದ ನಡೆದ ವಿದ್ಯಮಾನಗಳನ್ನು ತಿಳಿದರು. ಅವನ ಮೇಲೆ ಕನಿಕರಗೊಂಡು, ಒಂದು ಸ್ಥಳದಲ್ಲಿ ಅವನನ್ನು ಕುಳ್ಳಿರಿಸಿದರು. ಆಗ ಕ್ಲಾಸಿನಲ್ಲಿ ಮನೆಗೆ ಕೊಟ್ಟ ಪಾಠಗಳ ಕುರಿತು ಪ್ರಶ್ನೆಗಳು ನಡೆಯು

ತಿದ್ದುವು. ವಿದ್ಯಾರ್ಥಿಗಳಲ್ಲಿ ಅನೇಕರಿಗೆ ಏನೂ ಗೊತ್ತಿರಲಿಲ್ಲ. ಕೆಲವರಿಗೆ ಸ್ವಲ್ಪ ಮಾತ್ರ ಗೊತ್ತಿತ್ತು ಒಬ್ಬಿಬ್ಬರು ಮಾತ್ರ ಸಂಪೂರ್ಣವಾಗಿ ಸಿದ್ಧಮಾಡಿಕೊಂಡು ಬಂದಿದ್ದರು. ಈಗ ತಮ್ಮುಗೂ ಪ್ರಶ್ನೆಗಳು ಬಂದುವು. ತಮ್ಮು ಪ್ರತಿಯೊಂದಕ್ಕೂ ಸಮರ್ಪಕವಾಗಿ ಉತ್ತರ ಕೊಡುತ್ತ ಬಂದನಲ್ಲದೆ, ಕ್ಲಾಸಿನ ಸಮರ್ಥ ವಿದ್ಯಾರ್ಥಿಗಳಿಗೂ ಉತ್ತರ ಹೇಳಲಾಗದ ಪ್ರಶ್ನೆಗಳಿಗೂ ಸದುತ್ತರ ಕೊಟ್ಟನು. ಉಪಾಧ್ಯಾಯರಿಗೆ ಸಂತೋಷವಾಯಿತು. ಹುಡುಗರಿಗೆ ಆಶ್ಚರ್ಯವಾಯಿತು.

ಒಂದು ಗಂಟೆಗೆ ಶಾಲೆ ಬಿಟ್ಟಿತು. ಆಗ ಒಂದು ಗಂಟೆ ವಿರಾಮ; ಊಟಕ್ಕೆ; ಅಥವಾ ಫಲಾಹಾರಕ್ಕೆ. ತಮ್ಮು ಯಾವುದಕ್ಕೂ ಹೋಗಲಿಲ್ಲ. ತಂದೆ ಹೇಳಿದ ಮಾತುಗಳನ್ನು ನೆನಸಿಕೊಂಡು, ದಿನಕ್ಕೆ ಎರಡು ಊಟಗಳಿಂದಲೇ ಕಾಲಹರಣ ಮಾಡಬೇಕೆಂದು ಅವನು ನಿರ್ಣೈಸಿದ್ದನು.

ಅವನು ಜಗುಲಿಯಲ್ಲಿ ಒಂದು ಕಡೆ ನಿಂತಿದ್ದನು. 'ಇನ್ನು ಅಲೆಯುವುದಿಲ್ಲ' ಎಂಬುದನ್ನು ಬರೆದು ಮುಗಿಸಲು ಇದೇ ಸಮಯವೆಂದು ಯೋಚಿಸುತ್ತಿದ್ದನು. ಅಷ್ಟರಲ್ಲಿ ಅವನ ಉಪಾಧ್ಯಾಯರು 'ಟಿಫಿನ'ಗೆ ಹೋಗುತ್ತಿದ್ದವರು, ತಮ್ಮುವನ್ನು ಕರೆದು, 'ಮಗು! ನಿನ್ನಲ್ಲಿ ಒಳ್ಳೇ ಬುದ್ಧಿಶಕ್ತಿ ಇದೆ. ಇದನ್ನು ಕೆಡಿಸಿಕೊಳ್ಳಬೇಡ. ಚೆನ್ನಾಗಿ ಓದು; ಉತ್ತಮವಾಗಿ ಪಾಸಾಗುವೆ' ಎಂದು ತಮ್ಮುವಿನ ಬೆನ್ನು ತಟ್ಟಿದರು. ತಮ್ಮುವಿಗೆ ಸಂತೋಷವಾಯಿತು.

ತಮ್ಮು ಜಗಲಿಯನ್ನು ಬಿಟ್ಟು ಕೆಳಗೆ ಇಳಿಯುತ್ತಿದ್ದ. ಹಠಾತ್ತಾಗಿ ಹೆಡ್ಮಾಸ್ಟರರ ಜವಾನ ಹಿಂದಿನಿಂದ ಬಂದು ತಮ್ಮುವನ್ನು ಕರೆದ. 'ಹೆಡ್ಮಾಸ್ಟರರು ಕರೆಯುತ್ತಾರೆ' ಎಂದ. ತಮ್ಮು ಹೆಡ್ಮಾಸ್ಟರರ ಕೋಣೆಗೆ ಹೋಗುವಾಗ, ಕೋಣೆಯ ಹೊರಗೆ ಕೆಲವು ಮಂದಿ ಹುಡುಗರು ಗುಂಪು ಕೂಡಿದ್ದರು. ಒಳಗೆ ರಾಮರಾಯನೂ ಇದ್ದ. ರಾಮರಾಯನೇ ತಮ್ಮುವನ್ನು ೬ನೇ ಫಾರ್ಮಿಗೆ ತಂದು ನೂಕಿದ್ದನೆಂದು ಉಪಾಧ್ಯಾಯರ ವರದಿ ಹೋಗಿದ್ದಿತು.

ತಮ್ಮುವನ್ನು ವಿಚಾರಿಸಿ, ಹೆಡ್ಮಾಸ್ಟರರು ನಡೆದುದನ್ನು ತಿಳಿದು ಕೊಂಡರು. ರಾಮರಾಯನಿಗೆ 6 ಪೆಟ್ಟು ಕೊಟ್ಟು, 'ಹೋಗು ಕತ್ತೆ!' ಎಂದು ಗದರಿಸಿದರು. ರಾಮರಾಯ ಮೆಲ್ಲಗೆ ಅಲ್ಲಿಂದ ನುಣುಚಿಕೊಂಡ.

ಆ ಪೆಟ್ಟುಗಳನ್ನು ತಿಂದೂ ನಗುತ್ತಾ, ರಾಮರಾಯ ಜಗಲಿಯ ಮೇಲೆ ನಿಂತಿದ್ದ ತಮ್ಮುವಿನ ಬಳಿಗೆ ಬಂದು 'ಏನಯ್ಯಾ! ಗೆಳೆಯಾ! ನನಗೆ ಪೆಟ್ಟು ಬಿತ್ತೆಂದು ನಿನಗೆ ಆಶ್ಚರ್ಯವೇ? ದುಃಖವೇ? ಇದು ನಿತ್ಯಪೂಜೆ; ಆಗಾಗ ನನಗೆ ಹೀಗೆ ದಕ್ಷಿಣೆ ಸಿಕ್ಕುತ್ತಲೇ ಇರಬೇಕು. ಇಲ್ಲದಿದ್ದರೆ, ನಿದ್ರೆ ಬಾರದು. ಒಂದು ಸಲ, ತಲೆನೋವಿಂದ ಇಲ್ಲೆಲ್ಲಿಯೋ ಮೂಲೆಯಲ್ಲಿ ಮಲಗಿ ನಿದ್ರಿಸುತ್ತಿದ್ದ ಒಬ್ಬ ವಿದ್ಯಾರ್ಥಿಯ ಕೂದಲು ಕತ್ತರಿಸಿ, ಮುಖಕ್ಕೆ ಬಣ್ಣ ಬಳಿದೆನೆಂದು ಪೆಟ್ಟು ಬಿತ್ತು. ಒಂದು ಸಲ 'ಅಂಬುಜಾನನೆ' ಎಂಬ ಶಬ್ದಕ್ಕೆ 'ಅಂಬು' ಎಂದರೆ ಬಾಣ; ಆ ಬಾಣದಲ್ಲಿ 'ಜ' ಹುಟ್ಟಿದುದು ಯಾವುದೋ ಅದರಂತೆ ಮುಖವುಳ್ಳವರೆಂದು ಅರ್ಥ ಹೇಳಿದುದಕ್ಕೆ ಪೆಟ್ಟು ದೊರಕಿತ್ತು. ಒಂದು ಸಲ, ಬಿದುರು ತುಂಡಿಗೆ ಹುಲ್ಲಿನ ಕೈಕಾಲು ಮಾಡಿ ಇಟ್ಟು, ಅಂಗಿ, ಬಟ್ಟೆ ತೊಡಿಸಿ, ರಾತ್ರಿ ಹೊತ್ತು ಅದನ್ನು ಈ ಶಾಲೆಯ ಕಾವಲುಗಾರರ ಬಳಿ ನಿಲ್ಲಿಸಿ, ಅವರನ್ನು ಹೆದರಿಸಿದುದಕ್ಕಾಗಿ ಪೆಟ್ಟು ಬಿದ್ದಿತ್ತು. ಹಾಗೆಯೇ ಈ ಸಲ ಇದಕ್ಕೆ ಪೆಟ್ಟು' ಎನ್ನುತ್ತಾ, ಹೊರಟು ಹೋದ. ತಮ್ಮು ಅಸಹ್ಯದಿಂದ 'ಇವನೆಂತಹ ಕೆಟ್ಟ ಹುಡುಗ! ನಾಚಿಕೆ ಇಲ್ಲದವನು! ವಿದ್ಯಾರ್ಥಿಗಳಿಗೆ ಇಂಥ ತುಂಟತನವು ಸಲ್ಲುವುದೇ? ಇವನ ಸಹವಾಸದಿಂದ ಒಳ್ಳೆಯ ಹುಡುಗರೂ, ಮೂರು ದಿನಗಳಲ್ಲಿಯೇ ಕೆಟ್ಟು ಹಾಳಾಗಿ ಹೋಗುವರು' ಎಂದುಕೊಂಡ.

---

## ಎಂಟನೆಯ ಅಧ್ಯಾಯ.

## ಪತ್ರವ್ಯವಹಾರ.

ತಮ್ಮು ಕ್ರಮವಾಗಿ ದಿನನಿತ್ಯವೂ ತನ್ನ ಪಾಠಗಳನ್ನು ಓದುತಿದ್ದನು. ಯಾರೊಡನೆಯೂ ಮಾತಿಗಾಗಲೀ, ಸ್ನೇಹಕ್ಕಾಗಲೀ ಹೋಗುತಿರಲಿಲ್ಲ. ಅವನಿಗೆ ಶ್ರೀರಾಮಪುರದ ಹೆಡ್ಮಾಸ್ಟರರು ಹೇಳಿದ ಮಾತುಗಳೂ, ತಂದೆಯು

ಕೊಟ್ಟ ಉಪದೇಶವೂ ಚೆನ್ನಾಗಿ ನೆನಪಿನಲ್ಲಿ ಇದ್ದುವು. 'ನಮ್ಮ ಮುಂದಿನ ಭವಿಷ್ಯವೆಲ್ಲ ನಿನ್ನ ಮೇಲೆಯೇ' ಎಂಬ ಮಾತೊಂದು ಅಡಿಗಡಿಗೂ ಅವನ ಮನಸ್ಸನ್ನು ಕೊರೆಯುತಿತ್ತು. ಅವನು ಚೆನ್ನಾಗಿ ಓದಿ, ಪ್ಯಾಸ್ ಮಾಡಿ, ತನ್ನ ಕುಟುಂಬದ ಸ್ಥಿತಿಗತಿಗಳನ್ನು ಸರ್ವಪ್ರಕಾರದಿಂದಲೂ ಸುಧಾರಿಸ ಬೇಕೆಂದು ಸಂಕಲ್ಪಮಾಡಿದ್ದನು.

ತಮ್ಮುವಿನ ತರಗತಿಗೆ ಈಗ ಕನ್ನಡ ಪಂಡಿತರ ಪಾಠ ನಡೆಯುತ್ತಿ ಇದೆ. ಅವನಿಗೆ ಇದ್ದಕ್ಕಿದ್ದ ಹಾಗೆ ತಂದೆತಾಯಿಗಳ ನೆನಪು ಬಂತು. ಮನೆಯ ನೆನಪಾಯಿತು ಯಾವಾಗ ಮನೆಯನ್ನೂ, ಗ್ರಾಮವನ್ನೂ ಸೇರು ವೆನೋ, ಯಾವಾಗ ತಂದೆತಾಯಿಗಳನ್ನೂ, ಅಕ್ಕ ತಂಗಿಯರನ್ನೂ ನೋಡು ವೆನೋ ಎಂದು ಅವನು ಹಂಬಲಿಸುತ್ತ ಮೈಮರೆತನು. ಗಂಟೆ ಬಡಿದು, ಪಾಠ ಮುಗಿದು, ಪಂಡಿತರು ಪುಸ್ತಕಗಳನ್ನು ಕಟ್ಟಿಕೊಂಡು ಹೊರಟರೂ ಅವನಿಗೆ ಎಚ್ಚರವಾಗಲಿಲ್ಲ. ಪಕ್ಕದಲ್ಲಿದ್ದ ಆನಂದನು ಅವನನ್ನು ಮೆಲ್ಲಗೆ ಕರೆದುದೂ ಅವನಿಗೆ ಕೇಳಿಸಲಿಲ್ಲ. 'ಕ್ಷಮಿಸು; ತಮ್ಮು! ಆಗಲೇ ಕೊಡಲು ಮರೆತೆ;—ನಿನಗೊಂದು ಕಾಗದ' ಎಂದು ಆನಂದನು ಗಟ್ಟಿಯಾಗಿ ಹೇಳಿ ದನು.

ತಮ್ಮು ಹೊಡೆದೆಬ್ಬಿಸಿದವರಂತೆ ಎಚ್ಚರಗೊಂಡು 'ಎಲ್ಲಿ? ಇಲ್ಲಿ ತಾ!' ಎಂದು ಕೈನೀಡಿದನು. ಆನಂದನು ಕೊಟ್ಟನು. ನೋಡಿದರೆ ಅದು ಶಾಸ್ತ್ರಿಗಳ ಕಾಗದ.

ತಮ್ಮು ಕಾಗದದೊಡನೆ ಜಗುಲಿಯ ಒಂದು ಮೂಲೆಗೆ ಓಡಿದನು. ಬೆಳಗಿನ ಶಾಲೆಯು ಮುಗಿದಿದ್ದ ಕಾರಣ, ತಮ್ಮುವಿಗೆ ಕಾಗದವನ್ನು ಓದಲು ಧಾರಾಳ ಅವಕಾಶವು ದೊರಕಿತು. ತಮ್ಮು ಕಾಗದವನ್ನು ಒಮ್ಮೆ ಓದಿ ದನು. ಮತ್ತೊಮ್ಮೆ; ಮೂರನೆಯ ಸಲ! ಕಾಗದದ ಸಾರಾಂಶವು ಹೀಗೆ:—

'ಸುಖವಾಗಿ ತಲುಪಿದೆ. ತಲುಪಿ ಹತ್ತು ದಿನಗಳಾಯಿತು. ತಲುಪಿ ದೊಡನೆಯೇ ನಿನಗೆ ಪತ್ರ ಬರೆಯಲು ಅನುಕೂಲಿಸಲಿಲ್ಲ ಎಲ್ಲರೂ ಇಲ್ಲಿ ಕ್ಷೇಮ. ಅಜ್ಜಿಗೆ ಮಾತ್ರ ಹೊಟ್ಟೆಗೆ ಸ್ವಸ್ಥವಿರಲಿಲ್ಲ. ಈಗ ವಾಸಿ. ದಾಸಿ ಕರು ಹಾಕಿದೆ,—ಗಂಡು ಕರು. ಮನೆಯವರೆಲ್ಲರೂ ನಿನ್ನನ್ನು ನೋಡ

ಬೇಕೆನ್ನುತ್ತಾರೆ. ಅಜ್ಜಿ ಒಮ್ಮೊಮ್ಮೆ ನಿದ್ರೆಯಲ್ಲಿ 'ತಮ್ಮೂ ತಮ್ಮೂ' ಎಂದು ಕನವರಿಸುತ್ತಾಳೆ. ನಮ್ಮ ಶೇಷಗಿರಿಯಪ್ಪ ಪುಣ್ಯವಂತ. ಮಗ ಬಿ. ಎ. ಪ್ಯಾಸ್ ಮಾಡಿ ಎರಡನೇ ಗ್ರೇಡ್ ವಕೀಲನಾಗಿ ಬಂದಿದ್ದಾನೆ. ಮಳೆ ಕಡಿಮೆ. ಮನೆ ಬೇಸಾಯಕ್ಕೆ ಇನ್ನೂ ಶುರುವಿಲ್ಲ ಯೋಗಕ್ಷೇಮಕ್ಕೂ ಅಲ್ಲಿನ ಇತರ ಎಲ್ಲಾ ವಿಷಯಗಳಿಗೂ ಬರೆ. ಓದುವುದು ಕಡಿಮೆ ಮಾಡ ಬೇಡ. ಹೆಡ್ಮಾಸ್ಟರ್ ಸುಬ್ಬರಾಯರು ಪದ್ಯಮಂಜರಿಯ ಅರ್ಥಪುಸ್ತಕ ನಿನಗೆ ಕೊಟ್ಟಿದ್ದರಲ್ಲ? ಆ ಪುಸ್ತಕದ ಕುರಿತು ನಿಮ್ಮ ಕನ್ನಡ ಪಂಡಿತರ ಅಭಿಪ್ರಾಯ ವೇನೆಂದು ತಿಳಿಸಬೇಕಂತೆ—'ಆಶೀರ್ವಾದ.'

ತಮ್ಮುವಿಗೆ 'ಅರ್ಥಪುಸ್ತಕ'ದ ನೆನವಾದುದು ಈಗಲೇ. ಅವನು ಈಗಲೇ ತೋರಿಸಬೇಕೆಂದು ಹೋಟೆಲಿಗೆ ಓಡಿ, ಆ ಪುಸ್ತಕ ತಂದ. ತರು ವಾಗ, ಪುಣ್ಯಕ್ಕೆ ಪಂಡಿತರೂ ಇದಿರಿಗೇ ಬರುತ್ತಿದ್ದರು ತಮ್ಮು 'ಇದೊಂದು ಅರ್ಥದ ಪುಸ್ತಕ; ನಮ್ಮ ಶ್ರೀರಾಮಪುರದ ಹೆಡ್ಮಾಸ್ಟರರು ಮಾಡಿದ್ದು. ತಮಗೆ ತೋರಿಸಬೇಕೆಂದು ಅವರು ಕಾಗದ ಬರೆಸಿದ್ದಾರೆ' ಎಂದು ಹೇಳಿದನು.

ಪಂಡಿತರು ಆದರದಿಂದ ಆ ಪುಸ್ತಕವನ್ನು ತೆಗೆದುಕೊಂಡು ಕೊಂಚ ನೋಡಿ, 'ತಮ್ಮಾ! ಪುಸ್ತಕಗಳನ್ನು ಬರೆಯುವವರು, ಈಗೀಗ ಹೆಚ್ಚುತ್ತ ಬರುತ್ತಿದ್ದಾರೆ; ಅದು ಸಂತೋಷವೇ. ಆದರೆ ಹಳೆಗನ್ನಡ ಗ್ರಂಥಗಳಿಗೆ ಟಿಪ್ಪಣಿ ಬರೆಯುವುದು ಅಷ್ಟು ಸುಲಭವಲ್ಲ. ಒಂದೇ ಪದಕ್ಕೆ ಹಲವು ಅರ್ಥವಿದೆ. ಆ ಹಲವು ಅರ್ಥಗಳಲ್ಲಿ ಬೇಕಾದ ಪ್ರತಿಪದಾರ್ಥವು ಯಾವು ದೆಂಬುದು ಆಯಾ ಸಂದರ್ಭವನ್ನು ಹೊಂದಿಕೊಂಡಿದೆ. ನಿಮ್ಮ ಹೆಡ್ಮಾ ಸ್ಟರರು ಎಲ್ಲ ಕಡೆಗಳಲ್ಲಿಯೂ ಸಂದರ್ಭವನ್ನು ನೋಡಿಕೊಂಡೇ ಅರ್ಥ ಬರೆದ ಹಾಗೆ ನನಗೆ ತೋರಲಿಲ್ಲ' ಎಂದಿಷ್ಟೇ ಮೃದುವಾಗಿ ಹೇಳಿದರು. ತಮ್ಮ ಹೆಡ್ಮಾಸ್ಟರರು ಕನ್ನಡದಲ್ಲಿ ಬಹು ಗಟ್ಟಿಗರೆಂದು ತಿಳಿದಿದ್ದ ತಮ್ಮು ಈಗ ಆಕಾಶದಿಂದ ಹರಿದು ಪಾತಾಳಕ್ಕೆ ಬಿದ್ದಂತಾಯಿತು. ಅವನು ಮರುಮಾತಾಡದೆ ಅಲ್ಲಿಂದ ಹೊರಟು ಹೋದ.

ಅದೇ ದಿನ ಸಂಜೆ ತಮ್ಮು ತಂದೆಗೆ ಒಂದು ಉತ್ತರವನ್ನು ಬರೆದ. ಅದು ಹೀಗಿತ್ತು.

ತಾ.

ಶೀರ್ಘರೂಪರ ಚರಣಸನ್ನಿಧಾನದಲ್ಲಿ,— ಶಿವರಾಜಪುರ.

ತಮ್ಮುವಿನ ಅನಂತಾನಂತ ಬಿನ್ನಹ. ಅದಾಗಿ, ತಮ್ಮ ಕಾಗದವು ಈ ದಿನ ನನ್ನ ಕೈಸೇರಿತು. ತಾವೆಲ್ಲರೂ ಕ್ಷೇಮದಿಂದ ಇರುವಿರೆಂದೂ, ಅಜ್ಜಿಗೆ ಸ್ವಲ್ಪ ಗುಣಮುಖವಾಗಿದೆ ಎಂದೂ, ದಾಸಿ ಕರು ಹಾಕಿತೆಂದೂ ತಿಳಿದು ಬಹಳ ಸಂತೋಷವಾಯಿತು. ಮಳೆ ಇಲ್ಲಿಯೂ ಬಹಳ ಕಡಿಮೆ. ಬೇಸಾಯವು ಇನ್ನೂ ಆರಂಭವಾಗಿಲ್ಲ. 'ಒಳ್ಳೆಯ ಸಮಯದಲ್ಲಿ ಮಳೆ ಮೋಸಮಾಡಿತು; ಮುಂದೆ ಹೇಗೆ ಉಣ್ಣಬೇಕೋ!' ಎಂದು ಇಲ್ಲಿ ಮಾತಾಡುತ್ತಿದ್ದಾರೆ.

ನಾನು ಕ್ಷೇಮದಲ್ಲಿ ಇದ್ದೇನೆ. ನಮ್ಮ ಹೆಡ್ಮಾಸ್ಟರರು ಹೇಳಿರುವಂತೆ ತರಗತಿಯಲ್ಲಿ ನಡೆಯುವ ಪಾಠಗಳನ್ನು ಚೆನ್ನಾಗಿ ಲಕ್ಷ್ಯವಿಟ್ಟು ಕೇಳು ತಿದ್ದೇನೆ. ಮನೆಯಲ್ಲಿಯೂ ಅವುಗಳನ್ನು ಚೆನ್ನಾಗಿ ಕಷ್ಟಪಟ್ಟು ವ್ಯಾಸಂಗ ಮಾಡುತ್ತೇನೆ. ಅಂಗಸಾಧನೆಯನ್ನು ನಾನು ಮರೆತಿಲ್ಲ;—ಶಾಲೆಯಲ್ಲಿ ಆಗಲಿ, ಮನೆಯಲ್ಲಿಯಾಗಲಿ, ನಿತ್ಯವೂ ತಪ್ಪದೆ ಮಾಡುತಿದ್ದೇನೆ. 'ಫುಟ್ ಬಾಲ್' ಆಟಕ್ಕೆ ಇನ್ನೂ ಇಲ್ಲಿ ಪ್ರಾರಂಭವಿಲ್ಲ.

ನೀವು ಹೇಳಿದಂತೆ ನಾನು ಬಹಳ ಕಡಿಮೆ ಖರ್ಚು ಮಾಡುತಿದ್ದೇನೆ. ಎರಡೇ ಊಟ;—ಬಟ್ಟೆಗಳನ್ನೂ ನಾನೇ ಒಗೆದುಕೊಳ್ಳುತ್ತೇನೆ. ಸಂಜೆ ಶಾಲೆ ಬಿಟ್ಟ ಬಳಿಕ ಏನಾದರೂ ತಿನ್ನಬೇಕೆಂದು ಅನಿಸುತ್ತದೆ:—ಅಜ್ಜಿ ಅಲ್ಲಿ ರುವಾಗ, ನಿತ್ಯವೂ ಶಾಲೆ ಬಿಟ್ಟ ಬಳಿಕ, ಏನಾದರೂ ತಿನ್ನುವುದಕ್ಕೆ ಕೊಟ್ಟು ಕೊಟ್ಟು ಅಭ್ಯಾಸಮಾಡಿಬಿಟ್ಟಿದ್ದಾಳೆ. ಆದರೆ ಆ ಅಭ್ಯಾಸವೂ ಈಗ ಮೆಲ್ಲ ಮೆಲ್ಲನೆ ಮರೆಯುತ್ತ ಬಂದಿದೆ. ಇನ್ನು ಸ್ವಲ್ಪ ಕಾಲದಲ್ಲಿ, ಆ ಚಟವು ಪೂರ್ಣವಾಗಿಯೂ ನನ್ನನ್ನು ಬಿಟ್ಟು ಹೋದೀತೆಂದು ನನ್ನ ನಂಬಿಕೆ.

ನನಗೀಗ ಶಾಲೆಗೆ ಹೋಗುವ ಹಾದಿಯೂ, ನನ್ನ ಕ್ಲಾಸಿನ ಕೋಣೆಯೂ, ನನ್ನ ಹೋಟಲೂ ಎಲ್ಲವೂ ಚೆನ್ನಾಗಿ ಬಳಿಕೆಯಾಗಿದೆ. ಎಲ್ಲ ಉಪಾ ಧ್ಯಾಯರಿಗೂ ನನ್ನ ಮೇಲೆ ತುಂಬ ಮಮತೆ ಇದೆ. ಕನ್ನಡ ಉಪಾಧ್ಯಾಯರಿ ಗಂತೂ ನನ್ನನ್ನು ಕಂಡರೆ ಜೀವ ಪ್ರಾಣ. ಅವರು ಕನ್ನಡದಲ್ಲಿಯೂ,

ಸಂಸ್ಕೃತದಲ್ಲಿಯೂ ಒಳ್ಳೆಯ ವಿದ್ವಾಂಸರು. ಬೋಧನೆಯಲ್ಲಿಯೂ ಅವರು ಬಹಳ ಗಟ್ಟಿಗರು. ಅವರು ತರಗತಿಯಲ್ಲಿ ಹೇಳಿಕೊಡುವುದನ್ನೇ ಮನಸ್ಸಿಟ್ಟು ಕೇಳಿದರೆ ಸಾಕು,—ಪುನಃ ಕನ್ನಡ ಪಾಠಗಳನ್ನು ಮನೆಯಲ್ಲಿ ಗಟ್ಟಿಮಾಡಬೇಕೆಂದಿಲ್ಲ. ಆದರೂ ಕೆಲವು ಮಂದಿ ಕೆಟ್ಟ ವಿದ್ಯಾರ್ಥಿಗಳು ಕನ್ನಡದ ಪಾಠಗಳಿಗೆ ಮನಸ್ಸು ಕೊಡುವುದಿಲ್ಲ. ಮೆಲ್ಲಗೆ ಮಾತಾಡುತ್ತಾರೆ; ನಗುತ್ತಾರೆ; ತಂಟೆ ಮಾಡುತ್ತಾರೆ. ಕನ್ನಡ ಪಾಠವೆಂದರೆ ಅವರಿಗೊಂದು ಆಟ. ಪರೀಕ್ಷೆಗೆ ಎಂಟು ದಿನಗಳಿಗೆ ಮೊದಲು ಪಟ್ಟಾಗಿ ಓದಿದರೆ ಕನ್ನಡದಲ್ಲಿ ಪಾಸಾಗಬಹುದೆಂದು ಅವರ ಪರಿಹಾಸ್ಯ. ಇವೆಲ್ಲ ಶ್ರೀರಾಮಪುರದ ಶಾಲೆಯಲ್ಲಿ ಇದ್ದಿಲ್ಲ.

ಮಿಕ್ಕ ಪುಸ್ತಕಗಳನ್ನೆಲ್ಲ, ಮರುದಿನವೂ, ಅನಂತರವೂ ಆ ಅಂಗಡಿಯಿಂದಲೇ ತೆಗೆದುಕೊಂಡಿದ್ದೇನೆ. ಕನ್ನಡ ಪಾಠದ ಪುಸ್ತಕವು ಮಾತ್ರ ಇನ್ನೂ ಬಂದಿಲ್ಲ;—ಅಚ್ಚಿನಲ್ಲಿದೆಯಂತೆ ಬಂದೊಡನೆ ಅದನ್ನೂ ತೆಗೆದುಕೊಳ್ಳುತ್ತೇನೆ.

ನೀವು ಹೋಗುವಾಗ ನನ್ನ ಕೈಯಲ್ಲಿ ಕೊಟ್ಟ ಹಣವೆಲ್ಲ, ಪುಸ್ತಕಗಳನ್ನು ಕೊಳ್ಳುವುದರಲ್ಲಿಯೋ ವೆಚ್ಚವಾಗಿ ಹೋಗಿದೆ. ನನ್ನ ಅಂಗಿ ಬಟ್ಟೆಗಳು, ಗಿಡ್ಡವಾಗಿ, ಹಳೆಯದಾಗಿ ಕೆಲವು ಕಡೆ ಹರಿದು ಹೋಗಿದ್ದರೂ, ಸದ್ಯಕ್ಕೆ ಅವುಗಳನ್ನೇ ಹೊಲಿದು, ತೊಟ್ಟು ಸುಧಾರಿಸಿಕೊಳ್ಳುತ್ತೇನೆ. ಟೋಪಿಯ ಮಟ್ಟಿಗೆ,—ಇನ್ನೆರಡು ವರ್ಷ ಯೋಚನೆ ಇಲ್ಲ. ಬಣ್ಣ ಹೋದರೂ 'ಹಾಸನ್ ಟೋಪಿ' ಬಾಳಿಕೆ ಹೆಚ್ಚು. ಆದರೆ, ಕಂಬಳಿಯೊಂದಿಲ್ಲದೆ ತೊಂದರೆಯಾಗಿದೆ. ಮನೆಯಲ್ಲಿರುವುದನ್ನು, ರಾಮಯ್ಯ ಇನ್ನೊಮ್ಮೆ ಇಲ್ಲಿಗೆ ಬರುವಾಗ, ಅವನೊಡನೆ ಕೊಟ್ಟು ಕಳುಹಿಸಿರಿ.

ಹೋಟೆಲಿನಲ್ಲಿ ಊಟ ತಿಂಡಿಗಳೆಲ್ಲ ಚೆನ್ನಾಗಿಯೇ ಇದೆ. ಆದರೆ ಊಟಕ್ಕೆ ಬರುವವರ ದಾಂಧಲೆಯಿಂದ ಆಗಾಗ ಓದಿಗೆ ತೊಂದರೆಯಾಗುತ್ತದೆ. ಯತ್ನವಿಲ್ಲ.

ನಿಮ್ಮನ್ನೆಲ್ಲ ನೋಡಬೇಕೆಂದು ಬಹಳ ಆಸೆಯಾಗುತ್ತದೆ. ರಜೆ ಬಂದ ಮಾರಣೆಯ ದಿನವೇ ಊರಿಗೆ ಬಂದುಬಿಡುತ್ತೇನೆ.

ಅಮ್ಮನಿಗೂ, ಅಜ್ಜಿಗೂ, ನನ್ನ ಅನಂತಾನಂತ ಬಿನ್ನಹಗಳನ್ನು ತಿಳಿಸಿರಿ. ಪದ್ಮನಿಗೆ ನನ್ನ ಆಶೀರ್ವಾದ ಹೇಳಿರಿ.... ಇಂತಿ ಬಿನ್ನಹಗಳು,

**'ತಮ್ಮು.'**

---

## ಎಂಟನೆಯ ಅಧ್ಯಾಯ.

### ಪುನಃ ಶ್ರೀರಾಮಪುರ.

ನಾಲ್ಕೆಂಟು ತಿಂಗಳು ಕಳೆದುವು. ತಮ್ಮು ತಂದೆಗೆ ಕಾಗದದಲ್ಲಿ ಬರೆದಿದ್ದಂತೆ ಏಕಪ್ರಕಾರವಾಗಿ ಶಾಲೆಗೆ ಹೋಗುತ್ತಲೂ, ಪಾಠಗಳನ್ನು ಕಲಿಸುವಾಗ ಶ್ರದ್ಧೆಯಿಟ್ಟು ಕೇಳುತ್ತಲೂ, ಅವುಗಳನ್ನು ಕ್ರಮವಾಗಿ ಅಭ್ಯಸಿಸುತ್ತಲೂ ಇದ್ದನು. ಅವನು ಸಂಸಾರ ತಾಪತ್ರಯಗಳನ್ನು ಚೆನ್ನಾಗಿ ತಿಳಿದುಕೊಂಡವನಂತೆ ಆದಷ್ಟು ಕಡಿಮೆ ಹಣದಿಂದ ಕಾಲಯಾಪನೆ ಮಾಡುತಿದ್ದನು. ದಿನಕ್ಕೆರಡೇ ಊಟ ಮಾಡುವನು; ಬಟ್ಟೆಬರೆಗಳನ್ನು ತಾನೇ ಒಗೆದುಕೊಳ್ಳುವನು. ಅನವಶ್ಯಕವಾಗಿ ಅವನೊಂದು ಕಾಸನ್ನೂ ಹಾಳುಮಾಡನು; ಒಂದು ನಿಮಿಷವನ್ನೂ ವ್ಯರ್ಥಗೊಳಿಸನು. ಅವನು ಸಂಜೆ ಶಾಲೆ ಬಿಟ್ಟ ಮೇಲೆ, ಕ್ರಿಕೆಟ್, ಫೂಟ್‌ಬಾಲ್ ಮೊದಲಾದ ಆಟಗಳನ್ನಾಡಲು ಹೋಗುವನು. ಅದರಿಂದ ಸಾಕಷ್ಟು ವ್ಯಾಯಾಮವನ್ನು ಪಡೆದು ಹಿಂದಿರುಗುವನು.

ತಮ್ಮುವಿನ ವರ್ಷಾವಧಿಯ ಪರೀಕ್ಷೆ ಈಗ ಮುಗಿದಿದೆ. ಚುರುಕಾದ ಬುದ್ಧಿಯುಳ್ಳವನೂ, ಕಷ್ಟಪಟ್ಟು ಓದುವವನೂ ಆದ ತಮ್ಮು ಈ ಬಾರಿಯೂ ತರಗತಿಯಲ್ಲಿ ಮೊದಲನೆಯವನಾಗಿಯೇ ಪಾಸಾಗಿದ್ದಾನೆ. ತಮ್ಮುವಿನ ಸಂತೋಷಕ್ಕೆ ಪಾರವಿಲ್ಲ;—ಮೊದಲನೆಯವನಾಗಿ ಪಾಸಾದನೆಂದು ಮಾತ್ರವಲ್ಲ; ನಾಳೆ ಇಷ್ಟು ಹೊತ್ತಿಗೆ ಇಲ್ಲಿಲ್ಲ; ನಾಡಿದ್ದು ಇಷ್ಟು ಹೊತ್ತಿಗೆ ಮನೆ; ಅಜ್ಜಿ, ತಂದೆ, ತಾಯಿ ಇವರ ನಡುವೆ! ಅವರೀಗ ತನ್ನ ಬರವನ್ನು ಹಾರೈಸುತ್ತ ಎಷ್ಟು ಆತುರದಿಂದ ಕಾದು ಕುಳಿತಿರಬಹುದೋ! ಚಿಕ್ಕ ತಂಗಿಯಾದ ಪದ್ಮ ಇಷ್ಟರೊಳಗಾಗಿ ಎಷ್ಟು ಬಾರಿ ಅಣ್ಣನ ಹೆಸರೆತ್ತಿ

ಅವನ ಹಾದಿ ನೋಡಿ ಅತ್ತಿರಬಹುದೋ! ತಮ್ಮು ಈಗ ಇದೇ ಸುಖಸ್ವಪ್ನ ದಲ್ಲಿ ಓಲಾಡುತ್ತಿದ್ದನು.

ರಜೆ ಬಂದ ದಿನವೇ ತಮ್ಮು, ಶಾಸ್ತ್ರಿಗಳು ಕಳುಹಿದ ರಾಮುಯ್ಯನ ಗಾಡಿಯಲ್ಲಿ ಊರಿಗೆ ಹೊರಟ. ಊರು ಸೇರಿದ. ಒಂದು ವರ್ಷದ ಬಳಿಕ, ತಮ್ಮುಗೆ ಪುನಃ ತನ್ನ ಗ್ರಾಮದ ದರ್ಶನವಾಯಿತು. ಅದೇ ಗಡಿ ಕಲ್ಲು, ಅದೇ ಪರೇಲರ ಚಾವಡಿ, ಅದೇ ಗುಡ್ಡ, ಅದೇ ಕಾಡು, ಅದೇ ಹೊಲಗದ್ದೆ,—ಎಲ್ಲವೂ ಅದೇ; ವ್ಯತ್ಯಾಸವಿಲ್ಲ. ಶ್ರೀರಾಮಪುರದ ಶಾಲೆ ಯಾದರೂ ಮೊದಲಿದ್ದಲ್ಲಿಯೇ, ಮೊದಲಿದ್ದ ಹಾಗೆಯೇ ನಿಂತಿದೆ. ಶಾಲಾ ದಿನದ ಆಚರಣೆಗಾಗಿ, ಅಂದು ಅಂಟಿಸಿದ್ದ ಕಾಗದದ ಹೂಗಳೂ ಅಲ್ಲ ಲ್ಲಿಯೇ ಇವೆ. ಬಣ್ಣ ಮಾತ್ರ ಮಾಸಿದೆ. ತಮ್ಮು ಇದೆಲ್ಲವನ್ನೂ ಆಶ್ಚರ್ಯ ಮತ್ತೂ ಆನಂದದೊಡನೆ ನೋಡುತ್ತ ಬಂದನು. ಶಾಲೆಯ ಗಂಟೆ ಹೊಡೆಯುವುದು ಅವನಿಗೆ ಕೇಳಿಸಿತು. ಹುಡುಗರು ಹೊರಟರು. ಒಂದು, ಎರಡು, ಮೂರು,— ಇನ್ನು ಲೆಕ್ಕಮಾಡಲು ಆಗುವುದಿಲ್ಲ. 'ಅದ್ಯಾರು? ಗಾಡಿಯೊಳಗೆ? ತಮ್ಮು? ಬಂದಿಯಾ? ರಜೆ ಬಂತೇ?' ಎಂದು ಯಾರೋ ಕೂಗಿದರು. ತಮ್ಮುವಿನ ನೆರೆಕೆರೆಯ ಹುಡುಗರು, ತಮ್ಮು ಗಾಡಿಯ ಹೊರಗೆ ಮುಖ ಹಾಕಿದುದನ್ನು ಕಂಡು ಕೂಗಿದರು.

ಇಷ್ಟರಲ್ಲಿ ಹುಡುಗರ ಗುಂಪು ಗಾಡಿಯ ಸುತ್ತಲೂ ಸೇರಿತು. ತಮ್ಮುವಿನ ಮನೆಯ ತನಕವೂ ಬಂತು. ಗಾಡಿ ಬಂದ ಶಬ್ದ ಕೇಳಿ, ಸ್ನಾನಕ್ಕೆ ಇಳಿದಿದ್ದ ಅಜ್ಜಿ ಒದ್ದೆ ಬಟ್ಟೆಯಲ್ಲಿಯೇ ಓಡಿಬಂದಳು; ಬಡಿಸು ತ್ತಿದ್ದ ತಾಯಿ ಸೌಟು ಹಿಡಿದುಕೊಂಡೇ ಓಡಿಬಂದಳು. ಉಣ್ಣುತ್ತಿದ್ದ ತಂಗಿ ಅನ್ನದ ಬಟ್ಟಲನ್ನೇ ಎತ್ತಿಕೊಂಡು ಓಡಿ ಬಂದಳು. ನಾಲ್ಕು ಕಡೆಯಲ್ಲಿಯೂ 'ತಮ್ಮು ಬಂದ'ನೆಂಬ ಗದ್ದಲವಾಯಿತು. ನೆರೆಕೆರೆಯವರೂ ಅಲ್ಲಲ್ಲಿ ನಿಂತು ನೋಡಿದರು. ತಮ್ಮು ಗಾಡಿಯಿಂದ ಇಳಿದ.

'ಅಣ್ಣಾ! ಅಣ್ಣಾ!' ಎಂದು ಕಿರಿಚುತ್ತ 6 ವರ್ಷದ ಪದ್ಮ ತಮ್ಮುವಿನ ಕೈ ಹಿಡಿದು ಒಳಗೆ ಕರೆತಂದಳು. 'ಹುಡುಗರು ದಾರಿ ಬಿಡಿಯಪ್ಪಾ! ಸಾಮಾನು ತರಲಿ!' ಎಂದು ಮುದಿಯಜ್ಜಿ ಕೂಗಿತು. 'ತಮ್ಮು ಶಿವರಾಜ

ಪುರಕ್ಕೆ ಹೋದವನು ಹೇಗೆ ಆಗಿದಾನೆ? ಅವನು ಎಂಥಾ ಅಂಗಿ ಹಾಕಿದಾನೆ? ಎಂಥಾ ಟೋಪಿ ಹಾಕಿದಾನೆ?' ಎಂದು ಪರೀಕ್ಷಿಸುವ ಆತುರ ಆ ಹುಡುಗರಿಗೆ. ಹುಡುಗರು ಕದಲಲಿಲ್ಲ. ಅಜ್ಜಿ ಸಿಟ್ಟುಗೊಂಡು, ಒಂದು ಹುಡುಗನನ್ನು ಹೊಡೆಯಲಿಕ್ಕೆ ಹೋದಳು. ತಮ್ಮುವಿನ ತಾಯಿ, ನಗುತ್ತ 'ಹೋಗಿಯಪ್ಪಾ! ಊಟಕ್ಕೆ! ಆ ಮೇಲೆ ಬಂದು ತಮ್ಮುವನ್ನು ನೋಡುವಿರಂತೆ' ಎಂದು ಸಮಾಧಾನ ಹೇಳಿದಳು. ಹುಡುಗರು 'ಬೋಡುಬಾಯಿ ಅಜ್ಜಿ' ಎನ್ನುತ್ತ ಹೊರಟು ಹೋದರು.

ಗಾಡಿಯಿಂದ ಪೆಟ್ಟಿಗೆ, ಗಿಟ್ಟಿಗೆಗಳನ್ನೆಲ್ಲ ರಾಮಯ್ಯ ತೆಗೆದಿಟ್ಟು, 'ಉಸ್ಸಪ್ಪಾ!' ಒಂದು ಜಗಲಿಯ ಮೇಲೆ ಕೂತ. 'ಕುಡಿಯಲಿಕ್ಕೆ ಒಂದಿಷ್ಟು ನೀರು' ಅಂದ. ನೀರು, ಬೆಲ್ಲದ ಸರಬರಾಯಿ—ಅವನು ಕೇಳಿದ್ದೇ ತಡ; ಕ್ಷಣದಲ್ಲಿ ಬಂತು. ಮನೆಯ ಹೆಣ್ಣು ಮಕ್ಕಳು ಓಡಿ ಹೋಗಿ, ತಂದು ಕೊಟ್ಟರು. 'ಆ ಸಲ ಎತ್ತಿಗೆ ಹೆಗಲು ಬಂತು; ಈ ಸಲ ಎತ್ತು ಹೊಸದಾಯಿತು. ಹಾಗಾಗಿ ಊರು ಸೇರುವಾಗ ಮಧ್ಯಾಹ್ನ!' ಎಂದು ರಾಮಯ್ಯ ತಮ್ಮುವಿನ ತಾಯೊಡನೆ ಹೇಳಿಕೊಂಡ. 'ಒಳ್ಳೇದಾಯಿತು. ಊಟ ಮಾಡಿಕೊಂಡು ಹೋಗು!' ಎಂದು ಆಕೆ ಹೇಳಿದಳು. ರಾಮಯ್ಯಗೆ ಬೇಕಾದುದೂ ಅಷ್ಟೇ.

ತಮ್ಮು ಬರುವಾಗ ಶಾಸ್ತ್ರಿಗಳು ಪೂಜೆಗೆ ಕುಳಿತಿದ್ದರು. ತಮ್ಮು ಬಂದನೆಂದು ಅವರು, ಹೆಂಗಸರು ಮಕ್ಕಳಂತೆ, ಪೂಜೆ ಬಿಟ್ಟು ಎದ್ದು ಬರಲಿಲ್ಲ. ದೇವತಾರ್ಚನೆಯಲ್ಲಿರುವಾಗ, ಏನಾದರೂ ಅದನ್ನು ಮುಗಿಸದೆ ಅವರು ಏಳುತ್ತಿರಲಿಲ್ಲ. ಅವರಿಗೆ ದೇವರ ಪ್ರಾರ್ಥನೆ, ಧ್ಯಾನ, ಪೂಜೆ ಇವೇ ಮುಖ್ಯ; ಮಿಕ್ಕವುಗಳು ಅನಂತರ. ಈಗಿನ ಕೆಲವು ಅಶಾಸ್ತ್ರೀಯ ಶಾಸ್ತ್ರಿಗಳಂತೆ ಬೆಳಗ್ಗೆ ಏಳುವ ಮೊದಲೇ ಸಿಕ್ಕಿದುದನ್ನು ತಿನ್ನುವುದು, ಕುಡಿಯುವುದು, ಎಷ್ಟು ಹೊತ್ತಿಗಾದರೂ ಒಂದು ಸ್ನಾನಮಾಡುವುದು, ಜಪತಪ ಮಾಡಿದರಾಯಿತು, ಇಲ್ಲದಿದ್ದರೆ ಇಲ್ಲವೆಂದು ಅನ್ನ ತಿನ್ನುವುದು, ಹೀಗೇನೂ ಮಾಡತಕ್ಕವರಲ್ಲ ಆ ಶಾಸ್ತ್ರಿಗಳು. 'ಮಗ ಕ್ಷೇಮದಲ್ಲಿ ಬಂದನೇ? ಬರುವ ಹಾಗೆ ದೇವರು ಅನುಗ್ರಹಿಸಿದನೇ?' ಎಂದು ಅವರು, ತಮ್ಮು ಬಂದೊಡನೆ, ದೇವರಿಗೆ ಅಡ್ಡ ಬಿದ್ದರು. ಅವನ ಶ್ರೇಯಸ್ಸಿಗಾಗಿ ದೇವರಲ್ಲಿ ಮತ್ತೊಮ್ಮೆ ಪ್ರಾರ್ಥಿಸಿದರು.

ತಮ್ಮು ಪಾಸಾದನೆಂದು, ಅದರಲ್ಲಿಯೂ ತರಗತಿಯಲ್ಲಿ ಮೊದಲನೆಯವನಾಗಿ ಪಾಸಾದನೆಂದು ತಿಳಿದು ಮನೆಯವರೆಲ್ಲರಿಗೂ ಹಿಡಿಸಲಾರದಷ್ಟು ಆನಂದ. 'ದುರ್ಗಾದೇವಿಗೆ ಹರಿಕೆ ಹೇಳಿಕೊಂಡಿದ್ದೇನೆ. ನೀನು ಹೊರಡುವುದರೊಳಗಾಗಿ ಹರಿಕೆ ಸಲ್ಲಿಸಬೇಕು' ಎಂದು ತಾಯಿ ಮಗನಿಗೆ ತಿಳಿಸಿದಳು. ಅಜ್ಜಿಯಂತೂ 'ಸತ್ಯನಾರಾಯಣ ವ್ರತ' ಹೇಳಿಕೊಂಡೇ ಇದ್ದಳು.

ತಮ್ಮು ಬಂದನೆಂದು ಕೇಳಿ ಅವನನ್ನು ಬಲ್ಲ ಅನೇಕ ಮಂದಿ-ಹೆಚ್ಚಾಗಿ ಹೆಣ್ಣಿದ್ದ ಹೆಂಗಸರು,—ಶಾಸ್ತ್ರಿಗಳಲ್ಲಿಗೆ ಬಂದರು. ತಮ್ಮುವನ್ನು ನೋಡಿ ಮಾತಾಡಿಸಿದರು. ತಮ್ಮು ಕೊಂಚ ಉದ್ದಕ್ಕೆ ಬೆಳೆದಿರುವನೆಂದೂ, ಕೊಂಚ ಬೆಳ್ಳಗಾಗಿರುವನೆಂದೂ, ಕೊಂಚ ಬಡವಾಗಿರುವನೆಂದೂ ತಮತಮಗೆ ತೋರಿದಂತೆ ಹೇಳಿಕೊಂಡರು. 'ತಮ್ಮು! ನಮ್ಮ ಮನೆಗೆ ಬಾರದಿರಬೇಡಪ್ಪ' ಎಂದು ಕೆಲವರೂ, 'ಒಂದು ಊಟಕ್ಕಾದರೂ ಬಂದು ಹೋಗಬೇಕೆ'ಂದು ಕೆಲವರೂ ಅವನನ್ನು ಉಪಚರಿಸಿದರು. ತಮ್ಮು ಎಲ್ಲರೊಡನೆಯೂ 'ಹಾಗೆಯೇ ಆಗಲಿ' ಎಂದನು.

---

## ಒಂಭತ್ತನೆಯ ಅಧ್ಯಾಯ.

## ಹಳೇ ಹೆಡ್ಮಾಸ್ಟರರ ಭೇಟಿ.

ಮರುದಿನ ಬೆಳಿಗ್ಗೆ ತಮ್ಮು ಹೆಡ್ಮಾಸ್ಟರರನ್ನು ಕಾಣಲು ಹೋದನು. ಆದಿತ್ಯವಾರ;—ಹೆಡ್ಮಾಸ್ಟರರು ಮನೆಯಲ್ಲಿಯೇ ಇದ್ದರು. ತಮ್ಮು ಬಂದನೆಂದು ಅವರು ಕೇಳಿದ್ದರೂ, ವಾಡಿಕೆಯಂತೆ 'ಕ್ಷೇಮವೇ, ತಮ್ಮು? ಎಂದು ಬಂದೆ?' ಎಂದು ಕೇಳಿದರು.

**ತಮ್ಮು:**—'ನಿನ್ನೆ ಬಂದೆ. ಕ್ಷೇಮದಲ್ಲಿದ್ದೇನೆ.'

**ಹೆಡ್ಮಾಸ್ಟರರು:**—'ಪರೀಕ್ಷೆಯಾಯಿತೇ? ಫಲಿತಾಂಶವು ಗೊತ್ತಾಗಿದೆಯೇ?'

**ತಮ್ಮ:**—'ಆಯಿತು; ನಾನು 'ಪಾಸು;' ಕ್ಲಾಸಿನಲ್ಲಿ ಮೊದಲನೆಯವನು.'

**ಹೆ. ಮಾ:**—'ಹಾಗೇನು? ಬಹು ಸಂತೋಷ. ನಿಮ್ಮ ತಂದೆಗೆ ತಿಳಿಸಿದೆಯೋ ಇಲ್ಲವೋ?'

**ತ:**—'ತಿಳಿಸಿದೆ.'

**ಹೆ. ಮಾ:**—'ನಿಮ್ಮ ಶಾಲೆಯಲ್ಲಿ ಎಷ್ಟು ಮಂದಿ ಉಪಾಧ್ಯಾಯರಿದ್ದಾರೆ? ಎಷ್ಟು ವಿದ್ಯಾರ್ಥಿಗಳಿದ್ದಾರೆ? ಕಟ್ಟೋಣ ದೊಡ್ಡದೇ? ಪುಸ್ತಕ ಭಂಡಾರದಲ್ಲಿ ಒಳ್ಳೆಯ ಪುಸ್ತಕಗಳುಂಟೇ?'

ತಮ್ಮ ತಿಳಿದ ಮಟ್ಟಿಗೆ ಇವಕ್ಕೆ ಉತ್ತರ ಹೇಳಿದನು. 2–3 ಮಂದಿ ಎಲ್. ಟಿ.ಗಳು ಇರುವರೆಂದೂ ಹೇಳಿದನು.

**ಹೆ. ಮಾ:**—'ಕಲಿಸುವಿಕೆ ಹೇಗಿದೆ? ಮೆಟ್ರಿಕ್ಯುಲೇಶನಿನ ಫಲಿತಾಂಶ ಚೆನ್ನಾಗಿದೆಯೇ? ನಿಮ್ಮ ಮುಖ್ಯೋಪಾಧ್ಯಾಯರ ಹೆಸರೇನು?'

ತಮ್ಮ ಇವಕ್ಕೂ ಸರಿಯಾದ ಉತ್ತರವನ್ನೇ ಹೇಳಿದ. ಹೆಡ್ಮಾಸ್ಟರರು ಯೋಗ್ಯರೆಂದೂ, ಚೆನ್ನಾಗಿ ಕಲಿಸುತ್ತಾರೆಂದೂ, ಸುಸ್ವಭಾವಿಗಳೂ, ಶಾಂತಶೀಲರೂ ಎಂದೂ, ಶಾಲೆಯ 'ಡಿಸಿಪ್ಲಿನನ್ನು' ಚೆನ್ನಾಗಿ ಕಾಪಾಡುತ್ತಾರೆಂದೂ ಹೇಳಿದ.

**ಹೆ. ಮಾ:**—'ಅದೋ! ಬಂತು ನಡುವೆ ಇಂಗ್ಲೀಷ್ ಶಬ್ದ—'ಡಿಸಿಪ್ಲಿನ್'! ಏಕಯ್ಯ! 'ಶಿಕ್ಷಾಕ್ರಮ'ವೆಂದು ಕನ್ನಡದಲ್ಲಿ ಲಕ್ಷಣವಾಗಿ ಹೇಳಿದರೇನು ಧಾಡಿ? ನಿಮ್ಮ ಪೇಟೆಯ ಹ್ಯಾಸ್ಕೂಲಿನ ಕನ್ನಡವೆಲ್ಲ ಹೀಗೆಯೇ ಜಾತಿಗೆಟ್ಟ, ಕುಲಗೆಟ್ಟ ಹೊಲಸು ಕನ್ನಡವೇನು? ಎಲ್ಲಿಯಾದರೂ ನಮ್ಮಲ್ಲಿಯ ಹುಡುಗರು ಹೀಗೆ ಒಂದು ಕನ್ನಡ, ಒಂದು ಇಂಗ್ಲೀಷ್ ಮಾತಾಡಲಿ; ಬಲಿ ಹಾಕಿ ಬಿಟ್ಟೇನು.'

ತಮ್ಮ ನಾಚಿಕೆಯಿಂದ ತಲೆ ಬಗ್ಗಿಸಿದ.

**ಹೆ. ಮಾ:**—'ಹಾಗಾದರೆ, ತಮ್ಮಾ, ಆ ಊರಲ್ಲಿ 'ತಾಳಮದ್ದಲೆ'ಯ ಸಂಪ್ರದಾಯವಿಲ್ಲವೇ? ಭಾರತ, ರಾಮಾಯಣಗಳನ್ನೋದಿ ಅರ್ಥ ಹೇಳುವ ಪದ್ಧತಿ ಇಲ್ಲವೇ?'

**ತಮ್ಮು**:—'ಇದ್ದ ಹಾಗೆ ತೋರಲಿಲ್ಲ.'

**ಹೆ. ಮಾ**:—'ಸರಿ; ಸರಿ; ಅಂಥಾ ಊರಿನಲ್ಲಿ ಇನ್ನೆಂಥಾ ಕನ್ನಡ ವಿದ್ದೀತು? ತಾಳಮದ್ದಲೆ ಇಲ್ಲ; ರಾಮಾಯಣ ಭಾರತಗಳ ವಾಚನ ವಿಲ್ಲ. ಜನಸಾಮಾನ್ಯದಲ್ಲಿ ಸುಲಭವಾಗಿ ಕನ್ನಡದ ಪ್ರಚಾರವಾಗತಕ್ಕ ಈ ಮುಖ್ಯ ವಿಷಯಗಳೊಂದೂ ಅಲ್ಲಿ ಇಲ್ಲ. ಅಂದ ಬಳಿಕ ನಿನ್ನ ಕನ್ನಡ ವಾದರೂ, ಹೀಗಾದುದು ಆಶ್ಚರ್ಯವಲ್ಲ. ಅದು ಸಂಪರ್ಕದೋಷ. ಸಾಯಲಿ,—ಆ ಕನ್ನಡದ ಮಾತು. ಇಂಗ್ಲೀಷಿನಲ್ಲಿಯಾದರೂ ನಿನಗೆ ನಾಲ್ಕನೇ ಫಾರ್ಮಿಗೆ ಏನು ಕಲಿಸಿದ್ದಾರೆಯೋ ನೋಡುತ್ತೇನೆ' ಎಂದು ಇಂಗ್ಲಿಷ್ ವ್ಯಾಕರಣದಲ್ಲಿ 4ನೇ ಫಾರ್ಮಿಗೆ ಮೀರಿದ, ಆ ತರಗತಿಯಲ್ಲಿ ಆಗದ ಕೆಲವು ಪ್ರಶ್ನೆಗಳನ್ನು ಹಾಕಿದರು. ತಮ್ಮುವಿಗೆ ಕಲವಕ್ಕೆ ಉತ್ತರ ಹೇಳ ಲಾಗಲಿಲ್ಲ ಹೆಡ್ಮಾಸ್ಟರರು ನಗುತ್ತ, 'ಏನೋ ಒಂದಿಷ್ಟು ಗಿಳಿರಾಮನ ಪಾಠ ಕಲಿಸಿಟ್ಟಿದ್ದಾರೆ. ಸಾಮಾನ್ಯಜ್ಞಾನದ ಕಡೆಗೆ ಲಕ್ಷ್ಯವನ್ನೇ ಕೊಟ್ಟಿಲ್ಲ. ಮುಖ್ಯವಾಗಿ ಬೇಕಾದುದು ಸಾಮಾನ್ಯವಾದ ತಿಳುವಳಿಕೆ. ಗಿಳಿಪಾಠವಲ್ಲ. ಅದೆಲ್ಲಾ ಕಲಿಸುವ ಕ್ರಮದಲ್ಲಿ, ಅನುಭವದಲ್ಲಿ ಉಂಟು' ಎಂದರು.

ತಮ್ಮು ಸುಮ್ಮನಿದ್ದನು.

ಪುನಃ ಹೆಡ್ಮಾಸ್ಟರರು, 'ಮರೆತಿದ್ದೆ ಒಂದು ವಿಷಯ. ನನ್ನ ಅರ್ಥ ಪುಸ್ತಕದ ವಿಷಯದಲ್ಲಿ ನಿಮ್ಮ ಪಂಡಿತರೇನೆಂದರು? ಎಲ್ಲಾ ಶಾಲೆ ಗಳಿಂದಲೂ ಆ ಪುಸ್ತಕವನ್ನು ತರಿಸಿಕೊಂಡಿದ್ದಾರೆ. ನಿಮ್ಮ ಶಾಲೆಯಿಂದ ಮಾತ್ರ ಇಲ್ಲ; ನೀನೂ ಅದಕ್ಕೆ ಯಾವ ಉತ್ತರವನ್ನೂ ಬರೆದಿಲ್ಲ' ಎಂದರು.

ತಮ್ಮು ಸಿಕ್ಕಿಬಿದ್ದ. ಹೆಡ್ಮಾಸ್ಟರರಿಗೆ ಏನು ಹೇಳಬೇಕು ಈಗ? ಪಂಡಿತರು ಹೇಳಿದಂತೆ ಹೇಳಿದರೆ ಹೆಡ್ಮಾಸ್ಟರರಿಗೆ ಅಸಮಾಧಾನವಾಗುತ್ತದೆ. ಹೇಳದಿದ್ದರೆ ಹೆಡ್ಮಾಸ್ಟರರು ಬಿಡುವಂತಿಲ್ಲ. ತಮ್ಮು ಸ್ವಲ್ಪ ಯೋಚಿಸಿ 'ಪುಸ್ತಕದಲ್ಲಿ ದೋಷಗಳು ಕಡಿಮೆ' ಎಂದು ಅವರು ಹೇಳಿರುವುದಾಗಿ ತಿಳಿಸಿದ. ಹೆಡ್ಮಾಸ್ಟರರು ಆಶ್ಚರ್ಯದಿಂದ 'ಯಾವ ದೋಷಗಳಂತೆ? ನಾನೇನೋ ಕಿಟಲ್‌ರ ನಿಘಂಟುವನ್ನು ಹತ್ತಿರ ಇಟ್ಟುಕೊಂಡೇ ಅರ್ಥ ಬರೆ

ದಿದ್ದೇನೆ. ಮತ್ತೂ ದೋಷಗಳೆಂದರೇನೋ! ಇಂಥ ಸ್ವಪ್ರತಿಷ್ಠೆಯ ಪಂಡಿತರನ್ನು ತೃಪ್ತಿಗೊಳಿಸಲು ಬ್ರಹ್ಮನಿಂದಲೂ ಸಾಧ್ಯವಲ್ಲ'ವೆಂದರು.

ತಮ್ಮು ನಮಸ್ಕರಿಸಿ ಮನೆಗೆ ಹೊರಟ. 'ಹೋಗುವ ಮೊದಲು ಇನ್ನೊಮ್ಮೆ ಬಂದು ನೋಡು' ಎಂದು ಹೆಡ್ಮಾಸ್ಟರರು ಹೇಳಿದರು.

---

# ಹತ್ತನೆಯ ಅಧ್ಯಾಯ.

## V ಫಾರಂ.

ಶಿವರಾಜಪುರದ ಹ್ಯಾಸ್ಕೂಲಿನ ರಜೆ ಮುಗಿಯಿತು. ತಮ್ಮುವೂ ಮನೆಯಿಂದ ಹಿಂದೆ ಬಂದನು. ಈ ಸಲ ತಮ್ಮುವನ್ನು ಅಲ್ಲಿಗೆ ಕಳುಹಿಕೊಡುವ ಮೊದಲು, ಶಾಸ್ತ್ರಿಗಳು ಬಹು ಆಳವಾಗಿ ಯೋಚಿಸಬೇಕಾದ ಸಂಭವವು ಒದಗಿತ್ತು. ಶಾಸ್ತ್ರಿಗಳಿಗೆ ಸಾಲ ಕೊಟ್ಟ ಸಾಹುಕಾರರು, ಜಮೀನು ಒತ್ತೆ ಮಾಡಿಕೊಡದೆ, ಇನ್ನು ಮುಂದೆ ಹಣ ಕೊಡುವುದಿಲ್ಲವೆಂದು ಖಂಡಿತ ಹೇಳಿದ್ದರು. ಆ ಪ್ರಕಾರ ಇದ್ದ ಒಂದು ತುಂಡು ಜಮೀನೂ ಒತ್ತೆಯಾಗಿ ಹೋಗುವ ಹೊತ್ತು ಒದಗಿತ್ತು. ಅದೆಲ್ಲವೂ ತಮ್ಮುಗೆ ಗೊತ್ತು;—ಶಾಸ್ತ್ರಿಗಳು ಮಗನಿಗೆ ಹೇಳಿದ್ದರು.

ತಮ್ಮು ತನ್ನ ವಿದ್ಯಾಭ್ಯಾಸಕ್ಕಾಗಿ ಸಾಲವಾಯಿತೆಂದೂ, ಆ ಸಾಲವನ್ನು ತಾನು ಕಷ್ಟಪಟ್ಟು ಓದಿ ತೀರಿಸಬೇಕೆಂದೂ ನಿರ್ಧರಿಸಿದವನಾಗಿ, ಐದನೆಯ ಫಾರ್ಮಿನಲ್ಲಿ ಬಂದು ಕುಳಿತನು. ಎಂದಿನಂತೆ ಶ್ರದ್ಧೆಯಿಂದ ಪಾಠಗಳನ್ನು ಕೇಳಲೂ, ಕಲಿಯಲೂ ಮೊದಲು ಮಾಡಿದನು.

ಕಳೆದ ವರ್ಷ, ನಾಲ್ಕನೆಯ ಫಾರ್ಮಿನಲ್ಲಿ ತಮ್ಮುಗೆ ಯಾರೂ ಗೆಳೆಯರಿರಲಿಲ್ಲ. ಗೆಳೆಯರು ಬೇಕೆಂದು ಅವನು ಅಪೇಕ್ಷಿಸಲೂ ಇಲ್ಲ. ಆದರೆ ಈ ವರ್ಷ ಹಾಗಾಗಲಿಲ್ಲ. ತಮ್ಮುವಿನ ಅಕ್ಕಪಕ್ಕಗಳಲ್ಲಿ ಅವನಿಗಿಬ್ಬರು ಸ್ನೇಹಿತರು ದೊರಕಿದರು. ಒಬ್ಬನು ರಾಮಸ್ವಾಮಿ; ಒಬ್ಬನು ಚಕ್ರಪಾಣಿ.

ರಾಮಸ್ವಾಮಿ ಈ ಶಾಲೆಗೆ ಹೊಸಬ. ಅವನು ಕಳೆದ ವರ್ಷ ಕಾಲೇಜಿನ ವಿದ್ಯಾರ್ಥಿಯಾಗಿದ್ದ. ವರ್ಷಾವಧಿಯ ಪರೀಕ್ಷೆಯಲ್ಲಿ ಅವನಿಗೆ 'ಪ್ರಮೋಷನ್' ದೊರಕದುದರಿಂದ ಅವನು ಆ ಶಾಲೆಯನ್ನು ಬಿಟ್ಟು ಈ ಶಾಲೆಗೆ ಬಂದ. ಅವನು ಬುದ್ಧಿಶಕ್ತಿಯಲ್ಲಿ ಕಡಿಮೆಯಾದವನಲ್ಲ; ಆದರೆ ಮೈಗಳ್ಳ. 'ಬರೆದು ಬಿಟ್ಟ ಬಸವ.' ಸುಖಲೋಲುಪ್ತಿಯ ಪುಟ್ಟಸಾಮಿ.

ಚಕ್ರಪಾಣಿ ಒಡವಿದ್ಯಾರ್ಥಿ. ಅವನು ಬುದ್ಧಿಶಕ್ತಿಯಲ್ಲಿ ರಾಮಸ್ವಾಮಿಯಷ್ಟು ಪ್ರಬಲನಲ್ಲ. ಆದರೆ ಅವನ ವ್ಯಾಸಂಗವು ಕ್ರಮವಾಗಿತ್ತು. ಆದುದರಿಂದ, ಅವನು ಯಾವ ತರಗತಿಯಲ್ಲಿಯೂ ಅಪಜಯ ಹೊಂದದೆ, ಪ್ರತಿ ವರ್ಷವೂ ಪಾಸಾಗುತ್ತಿದ್ದ. ಕಳೆದ ವರ್ಷ ಅವನು ಇದೇ ಶಾಲೆಯಲ್ಲಿ ಇದೇ ಫಾರ್ಮಿನಲ್ಲಿ ಇದ್ದ. ಆದರೆ ತಮ್ಮು 'ಏ' ಭಾಗದಲ್ಲಿ; ಇವನು 'ಬೀ' ಭಾಗದಲ್ಲಿ. ಕಳೆದ ವರ್ಷಾವಧಿಯ ಪರೀಕ್ಷೆಯಲ್ಲಿ ತಮ್ಮು ತರಗತಿಯಲ್ಲಿ ಒಂದನೆಯವನಾದರೆ, ಚಕ್ರಪಾಣಿ ಎರಡನೆಯವನು. ಅವನಿಗೂ, ಇವನಿಗೂ ಬರೇ ಮೂರು ನಾಲ್ಕು ಮಾರ್ಕಿನ ವ್ಯತ್ಯಾಸ

ತಮ್ಮುವಿಗೆ ಚಕ್ರಪಾಣಿಯ ಸಹವಾಸದಿಂದ ಯಾವುದೊಂದು ಹಾನಿಯೂ ಸಂಭವಿಸುವಂತಿರಲಿಲ್ಲ. ಚಕ್ರಪಾಣಿ ತುಸು ಮಾತಿನವನು; ಸಜ್ಜನ; ಶಾಂತಸ್ವಭಾವದವನು. ಅವನು ತಮ್ಮುವನ್ನು ಯಾವಾಗಲೂ ಆದರದಿಂದ ಕಾಣುವನು, ಸ್ನೇಹಿತನೆಂದು ಗೌರವಿಸುವನು; ಅವನೆಂದಿಗೂ ಕಾಡು ಹರಟೆಯನ್ನು ಕೊಚ್ಚನು; ಅವನ ಮಾತುಕತೆಗಳೆಲ್ಲ ಪಾಠದ ಕುರಿತಾಗಿಯೇ.

ರಾಮಸ್ವಾಮಿ ಹಾಗಲ್ಲ. ಬುದ್ಧಿಶಾಲಿ ಎಂದು ಹೆಮ್ಮೆ. ಅವನ ಸ್ವಭಾವವಾದರೂ ಗಂಭೀರವಲ್ಲ; ಒರೇ ಚಲ್ಲು ಚಲ್ಲು. ಅವನು ಯಾವಾಗಲೂ ಹರಟುತ್ತಲೇ ಇರಬೇಕು. ಹರಟೆಯ ವಿಷಯವೆಲ್ಲ ಕೆಲಸಕ್ಕೆ ಬಾರದವೇ. ಅವನು ಚಿಕ್ಕ ವಯಸ್ಸಿನವನಾದರೂ ಅವನಿಗಾಗಲೇ ಸಿಗರೆಟ್, ಬೀಡಿಗಳ ಅಭ್ಯಾಸವಾಗಿಹೋಗಿತ್ತು. ದಿನವೊಂದಕ್ಕೆ 2—3 ಸಲ ಕಾಫೀ ಹೋಟಲಿಗೆ ನುಗ್ಗಬೇಕಾಗಿತ್ತು. ಉಡುಗೆಯ ಶಿಸ್ತಿನಲ್ಲಿಯೂ ಅವನು ಕಡಿಮೆಯಲ್ಲ. ಕನ್ನಡಕ, ಕಾಲರು, ನೆಕ್‌ಟೈ, ಬೂಟ್ಸುಗಳಿಲ್ಲದೆ

ಅವನೆಲ್ಲಿಗೂ ಹೊರಡುತ್ತಲೇ ಇರಲಿಲ್ಲ. ಹೊಸ ಕ್ರಮದಂತೆ ತಾನೇ ಕ್ಷೌರಮಾಡಿಕೊಳ್ಳುವುದನ್ನೂ ಅವನು ಕಲಿತಿದ್ದನು. ಅವನು ಆಗಿನ ಕಾಲದಲ್ಲಿ 'ಕ್ರಾಪ್' ಬಿಡಿಸಿಕೊಂಡ 'ರಿಸ್ಟ್‌ವಾಚ್' ಕಟ್ಟಿಕೊಂಡ ಒಬ್ಬ ಸುಧಾರಿತ ವಿದ್ಯಾರ್ಥಿ. ಅವನಿಗೆ ತಿಂಗಳಿಗೆ ಎರಡು ಸಲ 'ಮನಿಯಾರ್ಡರ್' ಬರುವುದೂ ಇತ್ತು. ಅವನ ಮನೆಯವರು ಅವನು ಬರೆಯುವಷ್ಟು ದುಡ್ಡು ಕಳುಹಿಸುವ ತ್ರಾಣವುಳ್ಳವರಾಗಿದ್ದರು.

ಅವನು ತಮ್ಮುವನ್ನು ಆಗಾಗ ಹಾಸ್ಯಮಾಡುತ್ತಿದ್ದ:—'ಹಾಸನ್ ಟೋಪಿ! ಹಾಸನ್ ಟೋಪಿ!' ಎಂದು; ಆಗಾಗ ಉಪದೇಶವನ್ನೂ ಮಾಡುತ್ತಿದ್ದ:—'ಯಾವಾಗಲೂ ಏಕೆ ಓದಿ ಓದಿ ಸಾಯುತ್ತೀಯೋ? ಪಾಸಾಗುವಷ್ಟು ಓದಿದರೆ ಸಾಲದೆ? ಚಕ್ರಪಾಣಿಗೆ ಹುಚ್ಚು; ಅಕ್ಷರಪಿಶಾಚಿ ಹಿಡಿದಿದೆ. ಯಾವಾಗ ನೋಡಿದರೂ, ಅವನ ಕೈಯಲ್ಲಿ ಪುಸ್ತಕವೇ. ವ್ಯಾಸಂಗವೇ. ಅದೇ ನೀನೂ ಅವನಂತೆ ಏಕೆ ಓದಿ ಓದಿ ಕಣ್ಣು ಕಳೆದುಕೊಳ್ಳಬೇಕೋ? ತಮ್ಮೂ! ನಿನ್ನಂಥವರು, ಪರೀಕ್ಷೆಗೆ ಒಂದು ತಿಂಗಳಿರುವಾಗ ಪಟ್ಟು ಹಿಡಿದು ಓದಿದರೆ ಸಾಲದೆ?' ಎಂದು.

ಮೊದಮೊದಲು ರಾಮಸ್ವಾಮಿಯ ಮಾತನ್ನು ತಮ್ಮು ಕಿವಿಯ ಮೇಲೆ ಹಾಕಿಕೊಳ್ಳುತ್ತಿರಲಿಲ್ಲ. ಕ್ರಮಶಃ ತಮ್ಮು ರಾಮಸ್ವಾಮಿಯ ಉಪದೇಶಕ್ಕೆ ಕಿವಿ ಜೋಲು ಬಿಡುತ್ತ ಬಂದ; ಆ ಉಪದೇಶದ ಒಲೆಯಲ್ಲಿ ಸಿಕ್ಕಿಬಿದ್ದ. ರಾಮಸ್ವಾಮಿ ಎನ್ನುವಂತೆ, 'ಬೇಕಾದುದಕ್ಕಿಂತಲೂ ಹೆಚ್ಚಾಗಿ ಓದಲೇಕೆ? ಪಾಸಾಗಲು ಒಂದು ತಿಂಗಳು ಪಟ್ಟಾಗಿ ಓದಿದರೆ ಸಾಲದೆ?' ಎಂದು ಅವನು ಯೋಚಿಸುವನು. ಆದರೂ ಬಾಲ್ಯದಿಂದಲೂ ಬಂದ ಅಭ್ಯಾಸಕ್ರಮವು ತಮ್ಮುವನ್ನು ಏಕಾಏಕಿ ಬಿಡಲಿಲ್ಲ. ರಾಮಸ್ವಾಮಿಯ ಮಾತು ಫಲಕಾರಿಯಾಗಲು ಕೆಲವು ತಿಂಗಳುಗಳೇ ಬೇಕಾದುವು.

ಕ್ರಮಶಃ ತಮ್ಮು ಓದುವ, ವ್ಯಾಸಂಗಮಾಡುವ ಹೊತ್ತು ಕಡಿಮೆಯಾಗುತ್ತ ಬಂತು. ಕ್ರಮವಾಗಿ ವ್ಯಾಸಂಗ ಮಾಡುವ ಚಕ್ರಪಾಣಿಯಲ್ಲಿ ತಿರಸ್ಕಾರಭಾವ ಉಂಟಾಯಿತು. 'ಚಕ್ರಪಾಣಿ ವರ್ಷವೆಲ್ಲ ಓದುತ್ತಿರಲಿ; ನಾನು ಅದನ್ನೆಲ್ಲ ಒಂದು ತಿಂಗಳಲ್ಲಿ ಓದಿ ಅವನನ್ನು ಸೋಲಿಸಲಾರೆನೆ?'

ಎಂಬ ಹೆಮ್ಮೆ ತಲೆದೋರಿತು. ತರಗತಿಯಲ್ಲಿ ಪಾಠ ನಡೆಯುವಾಗ, ರಾಮು ಸ್ವಾಮಿಯೂ, ತಮ್ಮುವೂ ಪಾಠಕ್ಕೆ ಮನಸ್ಸುಕೊಡದೆ ತಮ್ಮೊಳಗೆ ಗುಸು ಗುಟ್ಟುಕೊಳ್ಳಲು ಆರಂಭವಾಯಿತು. ಉಪಾಧ್ಯಾಯರಿಗೂ 'ತಮ್ಮು ಈಗ ಮೊದಲಿನ ಹಾಗಿಲ್ಲ'ವೆಂಬಂತೆ ತೋರಿತು. ಅವರೊಂದು ಬಾರಿ ತಮ್ಮು ವನ್ನು ಎಚ್ಚರಿಸಿಯೂ ಆಯಿತು.

ಉಪಾಧ್ಯಾಯರು ಎಚ್ಚರಿಸಿದ ಆ ದಿನ ತಮ್ಮು ಸ್ವಲ್ಪ ಪಶ್ಚಾತ್ತಾಪ ಪಟ್ಟ. 'ಇದುವರೆಗೂ ನಾನು ಯಾರಿಂದಲೂ 'ರಿಮಾರ್ಕ್' ಪಡೆದಿರ ಲಿಲ್ಲ. ಇಂದು ನಾನು ಮೇಸ್ಟರ ಬಾಯಿಗೆ ಬಿದ್ದೆ!' ಎಂದು ಅವನು ನಾಚಿಕೆಗೊಂಡ. ತಂದೆ ತನಗೆ ಹೇಳಿದ, ಸುಬ್ಬರಾಯರು ಉಪ ದೇಶಿಸಿದ ಮಾತುಗಳೆಲ್ಲ ಅವನ ಸ್ಮರಣೆಗೆ ಬಂದುವು. ತನ್ನ ಸಂಸಾ ರದ ಪ್ರಕೃತದ ಸ್ಥಿತಿಯನ್ನು ನೆನೆದು ಅವನ ಎದೆಯೊಡೆಯಿತು. ಅವನು ಆ ದಿನ ಎಲ್ಲಿಗೂ ಹೊರಗೆ ಹೋಗದೆ, ಯಾರ ಜತೆಗೂ ಸೇರದೆ ಶ್ರದ್ಧೆ ಯಿಂದ ಪಾಠಗಳನ್ನು ಕಲಿತ. ಮೂರು ನಾಲ್ಕು ದಿನಗಳ ವರೆಗೂ ಒಂದೇ ರೀತಿಯಲ್ಲಿ ಕಲಿತ. 'ತಮ್ಮು! ನೀನೀಗ ದಾರಿಗೆ ಬಂದೆ!' ಎಂದು ಉಪಾಧ್ಯಾಯರು ತರಗತಿಯಲ್ಲಿ ಅವನನ್ನು ಹೊಗಳಿದರು. ತಮ್ಮುವಿಗೆ ಸಂತೋಷದಿಂದ ಮುಖ ಊರಗಲವಾಯಿತು.

ಆದರೆ ಶನಿಯ ಹಾಗಿದ್ದ ರಾಮುಸ್ವಾಮಿ ತಮ್ಮುವನ್ನು ಬಿಡಲಿಲ್ಲ! 'ಏನೋ, ಟೋಪಿ! ಮೂರು ನಾಲ್ಕು ದಿನಗಳಿಂದ ಆಡುವ ಸ್ಥಳದಲ್ಲಿ ನಿನ್ನ ಸುಳಿವೇ ಕಾಣೆ; ಮೈ ಚೆನ್ನಾಗಿರಲಿಲ್ಲವೇ?' ಎಂದು ರಾಮುಸ್ವಾಮಿ ತಮ್ಮುವನ್ನು ಕೇಳಿದ. ತಮ್ಮು ತಲೆಯಲ್ಲಾಡಿಸಿದ.

'ಒಂದು ಶುಭ ಸಮಾಚಾರವಿದೆ; ಈ ಬಾರಿಯ ವರ್ಷಾವಧಿಯ 'ಸ್ಪೋರ್ಟ್ಸಿಗೆ' ನಮ್ಮ ಶಾಲೆಯಿಂದ ನನ್ನನ್ನೂ ನಿನ್ನನ್ನೂ ಆರಿಸಿದ್ದಾರೆ. ನಾವು ಈಗಿನಿಂದಲೇ ಅಭ್ಯಾಸಕ್ಕೆ ತೊಡಗಬೇಕು' ಎಂದು ರಾಮುಸ್ವಾಮಿ ಹೇಳಿದ.

'ವರ್ಷಾವಧಿಯ ಸ್ಪೋರ್ಟ್ಸಿಗೆ ಈಗಿನಿಂದಲೇ 'ಪ್ರಾಕ್ಟೀಸ್' ಬೇಕಿಲ್ಲ' ಎಂದ ತಮ್ಮು

'ನಿನಗೆ ತಿಳಿಯದು; ಈ ಸಾರಿ ಕಾಲೇಜಿನಲ್ಲಿ ಬಲಿಷ್ಠರಾದ ವಿದ್ಯಾರ್ಥಿಗಳಿದ್ದಾರೆ. ಅಲ್ಲದೆ ಕಳೆದ ವರ್ಷ 'ಮೆಡಲು' ಅವರಿಗೇ ಸಿಕ್ಕಿದೆ. ಅದನ್ನು ಉಳಿಯಿಸಿಕೊಳ್ಳಬೇಕೆಂದು ಅವರು ಆಗಲೇ 'ಪ್ರಾಕ್ಟೀಸಿ'ಗೆ ಆರಂಭಿಸಿದ್ದಾರೆ.'

'ಅವರು ತೊಡಗಲಿ; ನಾವು ಇನ್ನೂ ಹದಿನೈದು ದಿನ ಬಿಟ್ಟು ಪ್ರಾರಂಭಿಸಿದರೆ ಸಾಕು.'

'ಸಾಲದು; ಸಾಲದು;—ಅವರನ್ನು ನಾವು ಗೆಲ್ಲಬೇಕಾದರೆ, ನಾವು ಈಗಿನಿಂದಲೇ ಆರಂಭಿಸಬೇಕು. ಈ ಸಲ ಕಾಲೇಜಿನಲ್ಲಿ ಮುತ್ತಣ್ಣನೆಂಬ ವಿದ್ಯಾರ್ಥಿಯೊಬ್ಬನು ಬಂದು ಸೇರಿಕೊಂಡಿದ್ದಾನೆ. ಅವನು ಪಾಠದಲ್ಲಿ ಅಲ್ಲದಿದ್ದರೂ ಆಟದಲ್ಲಿ ಅನೇಕ ಮೆಡಲುಗಳನ್ನು ಹಿಂದೆ ಸಂಪಾದಿಸಿದ್ದಾನೆ. ಕಾಲೇಜಿನವರು ಅವನಿಗೆ ಕಾಲುಭಾಗ ಸಂಬಳ ಮಾಫಿಮಾಡಿ, ಅವನನ್ನು ಪ್ರೋತ್ಸಾಹಿಸುತ್ತಿರುವದು ಆ ಮೆಡಲನ್ನು ಈ ಬಾರಿಯೂ ಹೊಡೆದುಹಾಕುವುದಕ್ಕಾಗಿಯೇ. ಆದ್ದರಿಂದ ನಾವು ಅದನ್ನು ಬಿಡಬಾರದು. ಅವರನ್ನೂ ಮಣ್ಣುಮುಕ್ಕಿಸಿ ಬಿಡಬೇಕು. ತಿಳಿಯಿತೆ?

'ಹಾಗಾದರೆ ನಾಳೆಯಿಂದ 'ಪ್ರಾಕ್ಟೀಸ್' ಆರಂಭಿಸಬೇಕೆನ್ನುವೆಯಾ?'

'ನಾಳೆಯಿಂದಲೇ; ಖಂಡಿತವಾಗಿ; ಅದರ ಜತೆಯಲ್ಲಿ ಸೈಕಲ್ ಸವಾರಿಯನ್ನೂ ಕಲಿತುಬಿಡು. ಅದು ಸುಲಭ; ಅನುಕೂಲ.'

ಮರುದಿನದಿಂದ ಪ್ರತಿನಿತ್ಯವೂ ಬೆಳಗ್ಗೆ, ಸಂಜೆ ರಾಮುಸ್ವಾಮಿ–ತಮ್ಮು, ತಮ್ಮು—ರಾಮುಸ್ವಾಮಿ ಇಬ್ಬರಿಗೂ 'ಸ್ಪೋರ್ಟ್ಸಿ'ನ ಸಿದ್ಧತೆಯ ಕೆಲಸವಾಯಿತು. ಸೈಕಲ್ ಸವಾರಿಯ ಅಭ್ಯಾಸವಾಯಿತು. ಆಟದ ಗಲಾಟೆಯಲ್ಲಿ ಪಾಠವು ಸಹಜವಾಗಿ ಹಿಂದೆ ಬಿತ್ತು.

---

## ಹನ್ನೊಂದನೆಯ ಅಧ್ಯಾಯ.

### **ಆಟಗಳ ಸಂಘ.**

'ಸ್ಪೋರ್ಟ್ಸಿ'ನ ದಿನ ಬಂತು. ಆಟದ ಮೈದಾನಿನಲ್ಲಿ ಗೆರೆಗಳನ್ನು ಎಳೆದು, ಕಂಬಗಳನ್ನು ಹೂಳಿ, ಹಗ್ಗಗಳನ್ನು ಕಟ್ಟಿ, ನಿಶಾನೆಗಳನ್ನು ಊರಿ

ಶೃಂಗರಿಸಿದ್ದರು. ಕಾಲೇಜಿನವರು ಡೇರೆ ಹೊಡೆದಿದ್ದರು. ಇತರ ಶಾಲೆಯವರು ಅಲ್ಲಲ್ಲಿ ಕುಳ್ಳಿರುವಂತೆ, ಡೇರೆಯ ಪಕ್ಕದಲ್ಲಿಯೇ, ಆಸನಗಳನ್ನು ಏರ್ಪಡಿಸಿದ್ದರು.

ನಾಲ್ಕು ಗಂಟೆಗೆ ಸರಿಯಾಗಿ, ಜನಸ್ತೋಮವು ನಾಲ್ಕು ಕಡೆಗಳಿಂದಲೂ ಬಂದು ತುಂಬಲು ಆರಂಭಿಸಿತು. ಪೋಲೀಸಿನವರು ಆಟದ ಸ್ಥಳದೊಳಗೆ ಜನಸ್ತೋಮವು ಮುಂದೊತ್ತದಂತೆ ಪಹರೆ ಮಾಡುತ್ತಿದ್ದರು. ಬೇಂಡಿನವರು ಬೇಂಡ್ ಊದುತ್ತಿದ್ದರು. ಆಮಂತ್ರಣವಿದ್ದ ದೊಡ್ಡ ಮನುಷ್ಯರನ್ನು ಸ್ವಾಗತ ಮಾಡಲಿಕ್ಕೆ 'ಸ್ಪೋರ್ಟ್ಸ್' ಕಮಿಟಿಯ ಸೆಕ್ರಟರಿಗಳು ಒಂದೆಡೆ ನಿಂತುಕೊಂಡು, ಅಲ್ಲಿಗೆ ಬಂದವರ ಕೈಕುಲುಕಿ, ಏರ್ಪಡಿಸಿದ್ದ ಆಸನಗಳಲ್ಲಿ ಕುಳ್ಳಿರಿಸುತ್ತಿದ್ದರು. ಆ ದಿನ ಈ ಸಂತೋಷಸಂಭ್ರಮದಲ್ಲಿ ಭಾಗಿಗಳಾಗದ ಪುರಜನರು ಕೇವಲ ಅಲ್ಪ ಮಂದಿ ಎನ್ನಬಹುದು. ಕಲೆಕ್ಟರ್, ಜಜ್ ಮೊದಲಾದ ಸರಕಾರೀ ಉದ್ಯೋಗಸ್ಥರೂ, ಅನೇಕ ಮಂದಿ ಆಢ್ಯ ವರ್ತಕರೂ, ಜಮೀನ್ದಾರರೂ, ಡಿ॥ ತಾ॥ ಬೋರ್ಡ್ ಮೆಂಬರರೂ ಅಂದಿನ ನೋಟವನ್ನು ಕಾಣಲು ಅತ್ಯುತ್ಸಾಹದಿಂದ ನೆರೆದಿದ್ದರು. ಯುರೋಪೀಯ 'ಲೇಡಿ'ಯರೂ, ಹಿಂದೂ ಮಹಿಳೆಯರೂ ಬಂದಿದ್ದರು. ಇತರ ಕಾಲದಲ್ಲಿ ನಿರ್ಜನವಾಗಿ, ನಿರ್ಜೀವವಾಗಿ ತೋರುತ್ತಿದ್ದ ಆ ಆಟದ ಮೈದಾನು, ಈ ದಿನ ಜನಸ್ತೋಮದಿಂದಲೂ, ಧ್ವಜ, ಪತಾಕೆ, ತೋರಣಾದಿಗಳಿಂದಲೂ ಜೀವಕಳೆಯನ್ನು ತಳೆದಂತೆ ಶೋಭಾಯಮಾನವಾಗಿತ್ತು.

ಸಕಾಲದಲ್ಲಿ ಆಟವು ಆರಂಭಿಸಿತು. ಕಾರ್ಯಕ್ರಮದ ಪಟ್ಟಿಯ ಮೇರೆಗೆ, ಮೊದಲನೆಯದು 'ಚೆಂಡೆಸೆಯುವುದು;' ಅದಾಯಿತು. ಆ ಮೇಲೆ, ಎರಡನೆಯ ಮೂರನೆಯ ಆಟಗಳೂ ಮುಗಿದುವು. ಕ್ರಮವಾಗಿ ಮುಂದಿನವೂ ಒಂದೊಂದಾಗಿ ಸಾಗುತ್ತಿವೆ. ಜನಸ್ತೋಮವು ಆಗಾಗ ಜಯಘೋಷ ಮಾಡುತ್ತಿದೆ. ತಮ್ಮು ಕೆಲವು ಆಟಗಳಲ್ಲಿ ಈಗಾಗಲೇ ಮೊದಲನೆಯವನಾಗಿದ್ದಾನೆ. 'ಒಂದು ಮೈಲಿ ಓಟದ ಪಂಥದಲ್ಲಿ'ಯೂ ಅವನು ಗೆದ್ದರೆ, 'ಬಂಗಾರದ ಮೆಡಲ್' ಸಿಕ್ಕುವುದು ಖಂಡಿತ; ಅವನಿಗೆ ಹದಿನಯ್ದು ಇಪ್ಪತ್ತು ರೂಪಾಯಿಗಳ ಬಹುಮಾನವೂ ಖಂಡಿತ!

ಸ್ವಲ್ಪ ಹೊತ್ತಿನಲ್ಲಿ 'ಒಂದು ಮೈಲು ಓಟದ' ಆಟ ಬಂತು. ಈ ಆಟಕ್ಕೆ ಒಂದೊಂದು ಶಾಲೆಯಿಂದ ಒಬ್ಬೊಬ್ಬರು ಮಾತ್ರ ಸ್ಪರ್ಧಿಸಬಹುದಾಗಿತ್ತು. ಹಾಗೆ ಬೇರೆ ಬೇರೆ ಶಾಲೆಯ ೬-೭ ಜನ ವಿದ್ಯಾರ್ಥಿಗಳು ಸಾಲಾಗಿ ಬಂದು ಸಿದ್ಧವಾಗಿ ನಿಂತರು. ಕಾಲೇಜಿನ ಕಡೆಯಿಂದ ಮುತ್ತಣ್ಣನೂ ಬಂದನು. ಅವನು, ಇಂದು, ನಿರೀಕ್ಷಿಸಿದಷ್ಟು ಮಟ್ಟಿಗೆ, ಕೃತಾರ್ಥನಾಗಿರಲಿಲ್ಲ. ಕೆಲವು ಆಟಗಳಲ್ಲಿ ತಮ್ಮು ಅವನನ್ನು ಸೋಲಿಸಿದ್ದನು. ಆ ಕಾರಣದಿಂದ ಈ ಪಂಥ ದಲ್ಲಿಯಾದರೂ ತಮ್ಮುವನ್ನು ಸೋಲಿಸಿ, ಬಹುಮಾನ ಹೊಡೆಯಬೇಕೆಂದು ಮುತ್ತಣ್ಣನು ಕಾದುಕೊಂಡಿದ್ದನು. ವಾಡಿಕೆಯಂತೆ, ಸ್ಪರ್ಧಿಸುವವರ ಹೆಸ ರನ್ನು ಓದಿದುದಾಯಿತು; 'ಸಿದ್ಧವಾಗಿರಿ' ಎಂದು ಎಚ್ಚರಿಸಿದುದಾಯಿತು. ಓಡುವುದಕ್ಕೆ ಸೂಚನೆಯಾಗಿ ಪಿಸ್ತೂಲನ್ನೂ ಹಾರಿಸಿದುದಾಯಿತು. ಎಲ್ಲರೂ ಓಡಲಿಕ್ಕೆ ಪ್ರಾರಂಭಿಸಿದರು.

ಒಂದನೆಯ ಸುತ್ತು ಮುಗಿಯಿತು; ಎರಡು, ಮೂರು, ಆರು ಸುತ್ತು ಗಳೂ ಮುಗಿದುವು; ಆರನೆಯ ಸುತ್ತಿನ ಅಂತ್ಯದಲ್ಲಿ ಮೂರು ಮಂದಿ ಮಾತ್ರ ಓಡುತ್ತಿದ್ದರು. ಮಿಕ್ಕವರೆಲ್ಲ ಹಿಂದುಳಿದರು. ಯಾವ ಸುತ್ತಿನಲ್ಲಿ ಯಾರು, ಯಾವ ಶಾಲೆಯ ವಿದ್ಯಾರ್ಥಿ ಹಿಂದುಳಿದನೆಂದು ಹೇಳುವುದು ಇಲ್ಲಿ ಅಪ್ರ ಕೃತ. ಇನ್ನು ಅದನ್ನೂ ತಿಳಿಯಬೇಕೆನ್ನುವವರು, ಶಿವಪುರದ ಸ್ಥಳೀಯ ವಾರ್ತಾಪತ್ರದ ಅದೊಂದು 'ಬಾತಮಿ'ಯನ್ನೋದಿದರೆ ಸಾಕು. ಬಾತಮಿ ದಾರನು, ಅದರಲ್ಲಿ, ಈ 'ಸ್ಪೋರ್ಟ್ಸಿ'ನ ವಿವರಣೆಯನ್ನು ಆದ್ಯಂತವಾಗಿ ಬರೆ ದಿದ್ದಾನೆ. ಚೊಕ್ಕ ಕನ್ನಡದಲ್ಲಿಯಲ್ಲದಿದ್ದರೂ, 'ಸ್ಪೋರ್ಟ್ಸಿನ ಕನ್ನಡ'ದಲ್ಲಿ ಮೂರು ಕಾಲಮ್ಮುಗಳಷ್ಟು ಬರೆದಿದ್ದಾನೆ.

ಏಳನೆಯ ಸುತ್ತಿನಲ್ಲಿ ಮೂವರೂ ಇಲ್ಲ; ಇಬ್ಬರು ಮಾತ್ರ. ತಮ್ಮು ಮತ್ತೂ ಮುತ್ತಣ್ಣ. ಇದುವರೆಗೆ ಮುತ್ತಣ್ಣ ತಮ್ಮುವಿನ ಜತೆಯಲ್ಲಿಯೇ ಓಡುತ್ತ ಬಂದವನು, ಈಗ ದೊಡ್ಡ ಹೆಜ್ಜೆ ಹಾಕಲು ಆರಂಭಿಸಿದನು. ತಮ್ಮುವೂ ಉಸಿರು ಕಟ್ಟಿ ಓಡಲು ತೊಡಗಿದನು. ಆದರೇನು? ಮುತ್ತಣ್ಣ ನನ್ನು ಸೋಲಿಸುವುದು ಅಸಾಧ್ಯವೆಂದು ತಮ್ಮುಗೆ ತೋರಿತು. ಅವನ

ಕಾಲುಗಳು ಮುಂದಕ್ಕೆ ಹೊರಳದೆ ಹೋದುವು. ಅವನ ತಲೆ ತಿರುಗಿತು. ಕಣ್ಣು ಕತ್ತಲೆ ಬಂತು. ಜನಸ್ತೋಮದಿಂದ, 'ತಮ್ಮು' 'ತಮ್ಮು' ಎಂದೂ; 'ಮುತ್ತಣ್ಣ, ಮುತ್ತಣ್ಣ' ಎಂದೂ ಕೂಗುವುದು ಕೇಳಿಸಿತು. 'ಮುತ್ತಣ್ಣನು ಎಲ್ಲಿ?' ಎಂಬುದು ತಮ್ಮುಗೆ ತಿಳಿಯಲಿಲ್ಲ; ಕಾಣಲಿಲ್ಲ. ತಮ್ಮು ಓಡಿ ಓಡಿ ಕಾಲು ಸೋತು ಕಣ್ಣು ಮುಚ್ಚಿ ಬಿದ್ದ. ಕೂಡಲೇ ಜನಸ್ತೋಮದ ಗುಲ್ಲು ಕೇಳಿಸಿತು

ತಮ್ಮು ಕೆಲವು ನಿಮಿಷಗಳ ಮೇಲೆ ಕಣ್ಣು ತೆರೆದ. ಆಗ ಅವನು ಬಿದ್ದಲ್ಲಿ ಇರಲಿಲ್ಲ. ಯಾರೋ ಹೆಗಲ ಮೇಲೆ ಅವನನ್ನು ಹೊತ್ತುಕೊಂಡು ಹೋಗುವ ಹಾಗೆ ತೋರಿತು. ಅವನ ಹಿಂದೆ ಹುಡುಗರು ಗುಂಪು ಕೂಡಿ ಕೊಂಡು ಬರುವಂತೆ ತೋರಿತು. ಹುಡುಗರು ಚಪ್ಪಾಳೆ ಬಡಿಯುತ್ತಲೂ, ಟೋಪಿಗಳನ್ನು ಮೇಲಕ್ಕೆ ಹಾರಿಸುತ್ತಲೂ ಇದ್ದರು. 'ತಮ್ಮು! ಇನ್ನು ಗೆದ್ದೆ, ಬಿಡು; ಮುತ್ತಣ್ಣ ಸೋತ' ಎಂದು ರಾಮುಸ್ವಾಮಿ ಹೇಳಿದನು. ತನ್ನನ್ನು ಹೊತ್ತು ತರುತ್ತಿದ್ದವನು ಅವನೇ ಎಂಬುದು ಈಗ ತಮ್ಮುಗೆ ಗೊತ್ತಾಯಿತು.

ಆಟಗಳೆಲ್ಲ ಸಾಂಗವಾದ ಬಳಿಕ ಬಹುಮಾನಗಳನ್ನು ಡಿ। ಜಡ್ಜರ ಹೆಂಡತಿ ಹಂಚಿದರು. ತಮ್ಮುಗೆ ಬಂಗಾರದ ಮೆಡಲೂ, 22 ರೂಪಾಯಿ ಗಳೂ ಬಂದವು. ತಮ್ಮು ಆ ಶಾಲೆಯ ಅನೇಕ ಹುಡುಗರೊಡನೆ ಮೆಡ ಲನ್ನು ಪಡೆದುಕೊಂಡು ಹೆಡ್ಮಾಸ್ಟರರ ಬಳಿಗೆ ಹೋದನು. ಆಗ ಹೆಡ್ಮಾಸ್ಟರರು ತಮ್ಮುವನ್ನು ಕುರಿತು 'ಆಟದಲ್ಲಿ ಕೀರ್ತಿಯನ್ನು ನೀನು ಈ ಶಾಲೆಗೆ ಸಂಪಾದಿಸಿ ಕೊಟ್ಟಂತೆ, ಮುಂದೆ ಪಾಠದಲ್ಲಿಯೂ 'ಪರೀಕ್ಷೆಯಲ್ಲಿಯೂ ಸಂಪಾದಿಸಿ ಕೊಡುವೆ ಎಂದು ನಂಬಿದ್ದೇನೆ' ಎಂದರು.

---

## ಹನ್ನೆರಡನೆಯ ಅಧ್ಯಾಯ.

### ಒಂದು ಆಲೋಚನೆ.

ಮರುದಿನ ಬೆಳಗಾಗುವಷ್ಟರಲ್ಲಿ, ರಾಮುಸ್ವಾಮಿ ತಮ್ಮುವಿನ ಹಾಸಿ ಗೆಯ ಮೇಲೆ ಸಿದ್ಧವಾಗಿ ಕುಳಿತಿದ್ದ. 'ಏನಯ್ಯ, ತಮ್ಮೂ! ಎಚ್ಚರಿಕೆ

ಯಾಯ್ತೇ? ನಿನ್ನೆ ಆಟದಲ್ಲಿ ಬಹಳ ದಣಿದಿದ್ದೆ; ಹೇಗಿದ್ದೀ ಎಂದು ನೋಡಿ ಹೋಗಲು ಬಂದೆ, ಇಷ್ಟು ಬೆಳಗ್ಗೆ' ಎಂದನು.

**ತಮ್ಮು:**—'ಈಗ ಅಷ್ಟೇನೂ ದಣುವಿಲ್ಲ.'

**ರಾಮು:**—'ಸರಿ ಹಾಗಾದರೆ; ನನ್ನದೊಂದು ಸೂಚನೆ ಇದೆ. ನನ್ನ ಇತರ ಸ್ನೇಹಿತರೂ ಅದಕ್ಕೆ ಒಪ್ಪಿದ್ದಾರೆ.'

**ತ:**—'ಯಾವ ಸೂಚನೆ?'

**ರಾ:**—'ಮತ್ತೆ, ನಾಳಿನ ದಿವಸ, ಸಿದ್ಧೇಶ್ವರನ ದುರ್ಗಕ್ಕೆ ಹೋಗಿ ಬರೋಣ ಎಂತ.'

**ತ:**—'ಸಿದ್ಧೇಶ್ವರನ ದುರ್ಗ? ಎಲ್ಲಿಯಪ್ಪ ಅದು? ಅಲ್ಲಿ ಏನು ವಿಶೇಷ?'

**ರಾ:**—'ನೀನು ಇಲ್ಲಿಗೆ ಹೊಸಬ; ಆದ್ದರಿಂದ ಅದರ ಸಮಾಚಾರವೇ ತಿಳಿಯದೇನೋ! ಅದು ಈ ಪ್ರಾಂತ್ಯಕ್ಕೆಲ್ಲ ಬಹಳ ಹೆಸರಾದ ಸ್ಥಳ. ಇಲ್ಲಿಂದಲ್ಲಿಗೆ ಆರು ಮೈಲಿಗಳು ಮಾತ್ರ—ಒಳಹಾದಿಯಿಂದ; ಗಾಡೀ ರಸ್ತೆಯೂ ಇದೆ;—9 ಮೈಲು. ಅದು ಒಂದು ಸಣ್ಣ ದ್ವೀಪದ ಹಾಗಿದೆ. ಎತ್ತರದಲ್ಲಿದೆ. ಅದರ ಮೂರು ದಿಕ್ಕಿನಲ್ಲಿಯೂ ಒಂದು ನದಿಯುಂಟು. ನಾಲ್ಕನೆಯ ಪಕ್ಕದಲ್ಲಿ ಅಗಾಧವಾದ ಖಂದಕವುಂಟು;—ಕಾಲು ಜಾರಿ ಬಿದ್ದರೆ ಅಲ್ಲಿ ಎಲುಬಿನ ಚೂರು ಕೂಡ ಸಿಕ್ಕದು. ಅದು ಪೂರ್ವದಲ್ಲಿ ಒಬ್ಬ ಪ್ರತಾಪಶಾಲಿಯಾದ ಪಾಳಯಗಾರನ ಚಿಕ್ಕ ಪಟ್ಟಣವಾಗಿತ್ತಂತೆ. ಈಗಲೂ ಅಲ್ಲಿ ಆ ಪಟ್ಟಣದ ಪೂರ್ವಚಿಹ್ನೆಗಳು ಕಂಡುಬರುತ್ತಿವೆಯಂತೆ. ಅದನ್ನು ನೋಡಲು ಜನರು ಆಗಾಗ ಹೋಗಿಬರುತ್ತಾರೆ. ಹಾಗೆಯೇ ನಾವೂ ಒಮ್ಮೆ ನಾಲ್ಕು ಮಂದಿ ಸ್ನೇಹಿತರು ಒಟ್ಟಿಗೆ ಹೋಗಿ ನೋಡಿ ಬರೋಣ ಎಂತ. ಆಗದೆ? ಏನೆನ್ನುವೆ?'

**ತ:**—'ನನ್ನಿಂದ ಏನು ಅಡ್ಡಿ? ಆಗಲಿ! ನಾಳೆ ಶನಿವಾರ; ಶಾಲೆಗೆ ರಜೆ.'

ರಾ:—'ಆದರೆ ನಾಳೆಯ ಸಿದ್ಧತೆಯನ್ನು ಇಂದೇ ಮಾಡಿಡಬೇಕು. ಅಲ್ಲಿ ನಮಗೆ ಊಟ ತಿಂಡಿಯ ಸಾಮಗ್ರಿಗಳೇನೂ ದೊರೆಯದು. ಇಲ್ಲಿಂದಲೇ ಎಲ್ಲವನ್ನೂ ಸಾಗಿಸಿಕೊಂಡು ಹೋಗಬೇಕು.'

ತ:—'ಹಾಗಾದರೆ, ಬೆಳಗಿನ ಊಟವನ್ನು ತೀರಿಸಿ ಹೊರಡುವ ಯೋಚನೆಯಲ್ಲವೇ, ನಿಮ್ಮದು?'

ರಾ:—'ಅಲ್ಲ; ಬೆಳಗ್ಗೆ ಇಲ್ಲಿಂದ ಹೊರಡುವುದು; ಹೊರಡುವಾಗ ಇಷ್ಟು ಒತ್ತಿ, ರೊಟ್ಟಿ, ಹಣ್ಣುಹಂಪಲು,—ಇನ್ನೂ ಏನಾದರೂ ತಿಂಡೀ ತೀರ್ಥಗಳನ್ನು ಕಟ್ಟಿಕೊಳ್ಳುವುದು. ನದಿಯ ವರೆಗೆ ಹೋಗುವುದು; ಸ್ನಾನ ಮಾಡಿ ಹೊಳೆಬುತ್ತಿ ಉಣ್ಣುವುದು. ಹಾಗೆಯೇ ಹೊಳೆ ದಾಟಿ, ದುರ್ಗವನ್ನು ನೋಡಿಕೊಂಡು ಹಾಯ್ ಎಂದು ಸಂಜೆಗೆ ಹಿಂದಿರುಗುವುದು. ಇದು ನಮ್ಮ ಕಾರ್ಯಕ್ರಮ; ಅದಕ್ಕಾಗಿ ಖರ್ಚಿಗೆಂದು ಸ್ವಲ್ಪ ವಂತಿಗೆಯೂ ಆಗಲೇ ವಸೂಲಾಗಿದೆ.'

ತ:—'ಹಾಗೂ ಆಗಲಿ; ನನ್ನ ಅಡ್ಡಿ ಇಲ್ಲ. ನನ್ನ ಪಾಲಿನದಾಗಿ ವಂತಿಗೆ ನಾನೇನು ಕೊಡಬೇಕೋ ಅದನ್ನು ಕೊಟ್ಟುಬಿಡುತ್ತೇನೆ; ಎರಡು ರೂಪಾಯಿ ಸಾಲದೇ?'

ರಾ:—'ಸಾಕು; ಧಾರಾಳ. ಆದರೆ ನಮ್ಮಲ್ಲಿ ಕೆಲವರ ಕೈಯಲ್ಲಿ ಈಗ ಹಣವಿಲ್ಲ. ಊರಿಂದ 'ಮನಿಯಾರ್ಡರ್' ಬರಬೇಕಷ್ಟೆ. ನಿನ್ನೆ ನಿನಗೆ ಆಟದಲ್ಲಿ ಬಂದ ರೂಪಾಯಿಗಳಿವೆಯಲ್ಲ? ಅದನ್ನು ಸಾಲವಾಗಿ ಕೊಟ್ಟಿರು. ಆ ಮೇಲೆ, 'ಮನಿಯಾರ್ಡರ್' ಬಂದೊಡನೆಯೇ, ನಿನ್ನ ಹಣವನ್ನು ನಿನಗೆ ಕೊಡಿಸುತ್ತೇನೆ;—ನಿನ್ನ ಎರಡು ರೂಪಾಯಿ ಹೊರತು.'

ತಮ್ಮು ಬಹುಮಾನದ ಆ ರೂಪಾಯಿಗಳನ್ನು ಕೆಲವನ್ನಾದರೂ ಊರಿಗೆ ಕಳುಹಿಸಬೇಕೆಂದಿದ್ದ. ಅಥವಾ ಊರಿಂದ ಹಣ ಸದ್ಯಕ್ಕೆ ತರಿಸಿಕೊಳ್ಳದೆ ಅದನ್ನೇ ತನ್ನ ವೆಚ್ಚಕ್ಕಾಗಿ ಇಟ್ಟುಕೊಳ್ಳಬೇಕೆಂದಿದ್ದ. ಆದರೆ, ರಾಮಸ್ವಾಮಿಯ ಸೂಚನೆಯು ಅವನ ಈ ಯೋಚನೆಯನ್ನೆಲ್ಲ ತಲೆಕೆಳಗು ಮಾಡಿಬಿಟ್ಟಿತು. ಹಣವನ್ನು ತನ್ನಲ್ಲಿಯೇ ಉಳಿಸಿಕೊಳ್ಳಲು ತಮ್ಮು ಬೇಕಾ

ದಷ್ಟು ನೆವಗಳನ್ನು ಹೇಳಿದ. ಸಾಗಲಿಲ್ಲ. ಕೊನೆಗೆ, 'ರಾಮಸ್ವಾಮೀ! ಇನ್ನೆಂಟೇ ದಿನಗಳಲ್ಲಿ ಈ ಹಣವು ನನಗೆ ಹಿಂದಿರುಗಬೇಕು. ತಿಳಿಯಿತೇ?' ಎಂದು ಆ ರೂಪಾಯಿಗಳನ್ನು ಪೆಟ್ಟಿಗೆಯಿಂದ ತೆಗೆದು, ಎಣಿಸಿ, ರಾಮಸ್ವಾಮಿಯ ಕೈಯಲ್ಲಿಟ್ಟ.

ರಾಮಸ್ವಾಮಿ, 'ಹಾಗಾದರೆ, ಈ ದಿನ ನಾನಿನ್ನು ಪುನಃ ನಿನ್ನನ್ನು ನೋಡುವುದಿಲ್ಲ. ನಾಳೆಗೆ ಬೇಕಾದುದನ್ನೆಲ್ಲ ಕೊಂಡು ಸಂಗ್ರಹಿಸಲು ಈಗಲೇ ಹೊರಡುತ್ತೇನೆ. ನಾಳೆ ಬೆಳಗ್ಗೆ ಬಂದು ನಿನ್ನನ್ನು ಕೂಗುತ್ತೇನೆ. ಹೊರಡಲು ಸಿದ್ಧನಾಗಿರು' ಎನ್ನುತ್ತ ಹೊರಟು ಹೋದನು.

ಮರುದಿನ ಬೆಳಗ್ಗೆ ಸೂರ್ಯೋದಯಕ್ಕೆ ಮೊದಲೇ, ರಾಮಸ್ವಾಮಿ ಹೋಟಲ ಬಾಗಲಿಗೆ ಬಂದು ತಮ್ಮುವನ್ನು ಕೂಗಿದ. ಅವನ ಜತೆಯಲ್ಲಿದ್ದವರೂ ಕೂಗಿದರು. ತಮ್ಮು ಆಗಲೇ ಎದ್ದು ಮುಖ ತೊಳೆದು ಸಿದ್ಧನಾಗಿದ್ದವನು, ಒಡನೆಯೇ ಇವರೊಂದಿಗೆ ಹೊರಟ.

ಇನ್ನು ಶ್ಯಾಮಣ್ಣನ ಮನೆ, ಮಲ್ಲಾರಿ ಮನೆ, ಮಂಜಪ್ಪನ ಮನೆ,— ಎನ್ನುತ್ತ ಕೇರಿಯಿಂದ ಕೇರಿಗೆ, ಬೀದಿಯಿಂದ ಬೀದಿಗೆ ಅಲೆದು, ಸುತ್ತಿ, ಪಂಗಡದವರನ್ನು ಒಟ್ಟುಕೂಡಿಸಿಕೊಂಡು ಒಬ್ಬೊಬ್ಬರ ತಲೆಯ ಮೇಲೂ ತಿಂಡಿಯ ಗಂಟು ಹೊರಿಸಿ ದುರ್ಗಕ್ಕೆ ಹೊರಟದ್ದಾಯಿತು. ಸ್ವಲ್ಪ ದೂರ ನಡೆಯುವಷ್ಟರಲ್ಲಿ, ರಸ್ತೆಯನ್ನು ಬಿಟ್ಟು, ಒಳಹಾದಿಗೆ ಹೊಕ್ಕದ್ದಾಯಿತು.

ಬೆಳಗಿನ ಹೊತ್ತು ರಮಣೀಯವಾಗಿತ್ತು. ರಾತ್ರಿಯ ಕತ್ತಲೆಯ ಮುಸುಕು ಮರೆಯಾಗಿತ್ತು. ನೀಲವಾದ ಆಕಾಶದಲ್ಲಿ ಮಿನುಗುತ್ತಿದ್ದ ನಕ್ಷತ್ರಗಳ ಕಾಂತಿಯು ಕುಂದಿ, ಅಲ್ಲಲ್ಲಿ ಕುಂಕುಮ ಚೆಲ್ಲಿದಂತೆ ಕಾಣುತ್ತಿತ್ತು. ಸೂರ್ಯನು ಆಗಲೇ ಜಗತ್ತಿಗೆ ದರ್ಶನ ಕೊಡಲು ಪೂರ್ವದಿಕ್ಕಿನಲ್ಲಿ ಸನ್ನದ್ಧನಾಗುತ್ತಿದ್ದನು. ಗಿಡಮರಗಳ ಮೇಲಿದ್ದ ಹಕ್ಕಿ ಪಕ್ಷಿಗಳು ಸೂರ್ಯೋದಯದ, ಪ್ರಭಾತದ ಮಂಗಳಗೀತವನ್ನು, ಮಧುರವಾದ ಕಂಠದಿಂದ ಇಂಪಾಗಿ ಹಾಡತೊಡಗಿದ್ದವು.

'ಬೆಳಗಿನ ತಂಗಾಳಿಯು ಅದೆಷ್ಟು ಉಲ್ಲಾಸಕರ! ಉದುರಿ ಬಿದ್ದ ಈ ಸುರುಗಿಯ ಹೂಗಳ ಪರಿಮಳ ಅದೆಷ್ಟು ಆನಂದಕರ!—ಅದೋ, ಅಲ್ಲಿ

ನೋಡು, ಕಾಡುಮಲ್ಲಿಗೆ, ಗುಲಾಬಿ,—ಆ ಬೇಲಿಯಲ್ಲಿ' ಎನ್ನುತ ಗೆಳೆಯರ ಗುಂಪು ನಡೆಯುತಿತ್ತು. ಬಂಡೆಗಲ್ಲು, ಹೊಲ, ಕೆರೆಯ ಅಂಚು, ಮಂಳು ದಿನ್ನೆ, ತೋಟದ ಪಕ್ಕ, ಬಾವಿಯ ದಂಡೆ, ಕಾಡಿನ ಸಂದು, ಗುಡ್ಡದ ಬುಡ, ಮರದ ಸಂಕ ಇವುಗಳನ್ನು ಹತ್ತಿ, ಇಳಿದು, ಹಾದು, ಹೊಕ್ಕು ಕಾಲಿಗೆ ಒತ್ತಿದ್ದ ಕಲ್ಲು ಮುಳ್ಳುಗಳನ್ನು ಆಗಾಗ ಕಿತ್ತು ಬಿಸಾಡುತ್ತ, ಆನಂದದಿಂದ ಪದಗಳನ್ನು, ಹಾಡುತ್ತ 'ನಾ ಮುಂದೆ, ತಾ ಮುಂದೆ' ಎಂದು ಹುಡುಗರು ವೇಗವಾಗಿ ನಡೆಯುತ್ತಿದ್ದರು. ಭಾರವಾದ ಬುತ್ತಿಯ ಪಾತ್ರವನ್ನು ಹೊತ್ತು, ನಡೆಯಲಾರದೆ ಹಿಂದೆ ಬೀಳುತ್ತಿದ್ದ ಮಂಜಪ್ಪನನ್ನು ಕೈಲಾಗದವನೆಂದು ಹಾಸ್ಯ ಮಾಡುತ್ತಿದ್ದರು. ಒಮ್ಮೆ ಮಂಜಪ್ಪನಿಗೆ ಸಹಿಸಲಾರದ ಸಿಟ್ಟು ಬಂದು ಬುತ್ತೀ ಪಾತ್ರವನ್ನು ಕೆಳಗೆ ಜರಿದ. 'ಎಲ್ಲಿ, ನೀವೇ ಹೊತ್ತು ಕೊಂಡು ಬನ್ನಿ, ನನ್ನಿಂದಾಗದು' ಎಂದು ಕೂತ. ಅಲ್ಲಿಗೆ ಅವನ ಕುಚೇಷ್ಟೆ ನಿಂತಿತು. ಯಥಾಪ್ರಕಾರ ದಾರಿ ಸಾಗಿತು.

---

## ಹದಿಮೂರನೆಯ ಅಧ್ಯಾಯ.

## ವಿನೋದ ವಿಹಾರ.

ಹಳ್ಳಿಗಳನ್ನು ದಾಟಿ, ಹೊಲಗಳಲ್ಲಿ ನಡೆದು, ಕಾಡುಮೇಡುಗಳನ್ನು ಸುತ್ತಿ ಇಷ್ಟು ದೂರ ಬಂದರೂ, ಆ ದುರ್ಗದ ಬಂಡ, ಅದರ ಬುಡ ದಲ್ಲಿರುವ ನದಿ ಎರಡೂ ಕಾಣಿಸಲಿಲ್ಲ. ದುರ್ಗವು ಮಾತ್ರ ಆಗಿ ನಿಂದಲೂ ಹತ್ತಿರದಲ್ಲಿಯೇ ಕಾಣಿಸುತ್ತಿದೆ; ಆದರೆ ಇನ್ನೂ ಅಲ್ಲಿಗೆ ದೂರ ವೆಷ್ಟೆಂದು ಅನೇಕರಿಗೆ ಗೊತ್ತಿಲ್ಲ. 'ಈ ಹಾದಿ ಇಷ್ಟು ಕಷ್ಟವೆಂದು ಮೊದಲೇ ತಿಳಿದಿದ್ದರೆ, ಇದನ್ನು ಬಿಟ್ಟೇ ಬಿಡಬಹುದಿತ್ತೆ'ಂದು ಕೆಲವರು; ಹಿಂದಿರುಗುವಾಗಲಾದರೂ ರಸ್ತೆಯಿಂದ ಹೋಗುವ; ಈ ಹಾಳು ದಾರಿ ಬೇಡ'ವೆಂದು ಕೆಲವರೂ ತಲೆಗೊಂದರಂತೆ ಆಡಿದರು. 'ತೋಳ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲು' ಎಂಬಂತೆ ಅವರನ್ನು ಈ ಹಾದಿಯಲ್ಲಿ

ಕರೆತಂದ ಶಿವಯ್ಯ ಎಂಬ ಗೆಳೆಯನನ್ನು ಹಂಗಿಸಿ ಭಂಗಿಸಿದರು. ವೇಟೆ ಪಟ್ಟಣಗಳಲ್ಲಿ ತಿರುಗಿದವರಿಗೆ ಕಲ್ಲು ಮುಳ್ಳಿನ ಈ ಒಳಹಾದಿ 5 ಮೈಲಿಗೆ ಬದಲು 10 ಮೈಲೆಂದೇ ತೋರಿತು. ನಡೆದು ನಡೆದು ಬೇಸರ ಹುಟ್ಟಿತು. 'ನಡೆವಷ್ಟೂ ಇದೆ' ಎಂಬ ಗೊಣಗಾಟವು ಆರಂಭವಾಯಿತು. ಇಷ್ಟರಲ್ಲಿ ಹೊಳೆಯುಬಾಗಿಲು ಕಾಣಿಸಿತು. ಹುಡುಗರಿಗೆ ಹೊಸ ಜೀವ ಬಂತು; ಹೊಸ ಜೀವ.

ನದಿ ಅಗಲವಾಗಿದ್ದರೂ ಹೆಚ್ಚು ನೀರು ಇರಲಿಲ್ಲ. 'ದಾಟಬಹುದು. ನೀರು ಮೊಳಕಾಲು ವರೆಗೆ ಮಾತ್ರ' ಎಂದು ಗೆಳೆಯನೊಬ್ಬನು ನದಿಗೆ ಇಳಿದು, ಆಳವನ್ನು ನೋಡಿ ತಿಳಿಸಿದನು.

ನದಿ ಶಾಂತವಾಗಿ ಹರಿಯುತಿತ್ತು. ದುರ್ಗದ ಮೂರು ಭಾಗಗಳನ್ನೂ ಬಳಸಿ ಬಂದಿತ್ತು. ಒಂದು ಭಾಗದಲ್ಲಿ ಸ್ವಲ್ಪ ವೇಗವಾಗಿ ಹಾರುತ್ತ, ಏಳುತ್ತ, ಬೀಳುತ್ತ, ಕುಣಿಯುತ್ತ ಹರಿಯುತಿತ್ತು. ಬಳಿಕ ಸಮತಟ್ಟಾಗಿ; ನಿಧಾನವಾಗಿ. ಅಲ್ಲಿ ಸ್ವಲ್ಪ ದೂರದ ವರೆಗೆ ನದಿಯ ನೀರು ಬತ್ತಿಹೋಗಿತ್ತು; ಮರಳು ರಾಶಿಯೊಂದು ತಲೆಯೆತ್ತಿಕೊಂಡಿತ್ತು. ಅಲ್ಲಿ ನದಿ ಎರಡು ಕವಲಾಗಿ ಒಡೆದಿತ್ತು. ಒಂದು ಕವಲು ತನ್ನ ದಾರಿಯಲ್ಲಿ ಸಾಲಾಗಿದ್ದ ಸಣ್ಣ ಬಂಡೆಗಳ ಮೇಲೆ ಹರಿದು ಇಳಿಯುತಿತ್ತು. ಇಳಿಯುವಾಗ ನೀರಿನ ಬೆಳ್ಳಗಿನ ನೊರೆ ಸೂರ್ಯಕಿರಣಗಳೊಡನೆ ಬೆರೆತು ಥಳಥಳಿಸುತಿತ್ತು. ಮತ್ತೊಂದು ಕವಲು, ಮರಳು ರಾಶಿ ಕಾಣಿಸುವ ವರೆಗೂ ಬೇರೆಯಾಗಿ ಹರಿದು, ಕೊನೆಗೆ ಆ ಕವಲಿನೊಡನೆ ಸೇರಿ ಮೊದಲಿನಂತೆ ಒಂದಾಗಿ ಹರಿಯುತಿತ್ತು. ಪುನಃ ಒಂದಾಗಿ ಹರಿಯುತ್ತಿದ್ದ ನದಿ ಎರಡು ಸೀಳಾಯಿತು. ನದಿಯ ಮಧ್ಯದಲ್ಲಿ ಒಂದು ಎತ್ತರವಾದ ಮಣ್ಣಿನ ದಿಣ್ಣೆ. ಮಳೆಗಾಲದಲ್ಲಿ ಪ್ರವಾಹ ಬಂದಾಗ ಮುಳುಗುವುದು; ಮಳೆ ಮುಗಿದಾಗ ಮೇಲಕ್ಕೆದ್ದು ತೋರುವುದು. ಅಲ್ಲಿ ಗಿಡ, ಮರ, ಬಿದಿರು ಹಿಂಡಲುಗಳಿದ್ದುವು. ಅದು ದೂರದಲ್ಲಿ ಒಂದು ಆಶ್ರಮದಂತೆ ತೋರುತಿತ್ತು. ಆ ಕಾರಣದಿಂದ ಅದಕ್ಕೆ ಯಾರೋ 'ಗೌತಮಾಶ್ರಮ'ವೆಂದು ಹೆಸರಿಟ್ಟಿದ್ದರು.

ಆ ಹೆಸರು ಇನ್ನೂ ಹೋಗಿರಲಿಲ್ಲ. ಅಲ್ಲಿಂದ ಮುಂದೆ ಆ ಮಣ್ಣು ದಿಣ್ಣೆಯನ್ನು ದಾಟಿದೊಡನೆಯೇ ಎಂದಿನಂತೆ ನದಿ ಕೂಡಿ ಕವಲುಗಳಿಲ್ಲದೆ ಒಂದಾಗಿ ಮುಂಬರಿಯುತಿತ್ತು. ನದಿಯ ನೀರು ಮಾತ್ರ ಅಲ್ಲಿಂದತ್ತ ಹರಿಯುವಂತೆ ತೋರುತ್ತಿರಲಿಲ್ಲ. ನಿಂತಲ್ಲಿಯೇ ನಿಂತಿತ್ತು. ಅಪರೂಪ ವಾಗಿ ಇಲ್ಲಿಗೆ ಹಳ್ಳಿಯ ಜನರು ಸ್ನಾನಕ್ಕಾಗಿ 2—3 ಮೈಲುಗಳ ದೂರ ದಿಂದ ಬರುವರು. ಮಿಕ್ಕ ಸಮಯದಲ್ಲಿ ಇಲ್ಲಿ ನರಹುಳವಿಲ್ಲ ಎಲ್ಲೆಲ್ಲಿಯೂ 'ಭೋ' ಎನ್ನುತಿತ್ತು.

ಹುಡುಗರಿಗೆ ಈ ನದಿಯ ತೀರವನ್ನು ಕಂಡೊಡನೆಯೇ 'ಕುಶಾಲು' ಎದ್ದಿತು. ಅವರು ನದಿಯ ತೀರದಲ್ಲಿ ಉದ್ದಕ್ಕೆ ಓಡಿದರು. ತೀರದಲ್ಲಿ ಬೆಳದಿದ್ದ ಕಾಡುಗಿಡಗಳನ್ನು ಕಿತ್ತು ಹೊಡೆದುಕೊಂಡರು. ಮರಳನ್ನು ಮುಖ ಮೋರೆ ನೋಡದೆ ಅವರಿಗೊಬ್ಬರು ಎರಚಿಕೊಂಡರು. ಮರಗಳ ಮೇಲಿದ್ದ ಮಂಗಗಳಿಗೆ ಕಲ್ಲು ಹೊಡೆದರು. ಅವು ಹಲ್ಲು ಕಿರಿಯುತ್ತಲೇ ತಾವೂ ಹಲ್ಲು ಕಿರಿದರು. ದೊಡ್ಡ ಬಂಡೆಗಳ ಮೇಲೇರಿ ಅಲ್ಲಿ ಹಾರಿ ದರು; ಕುಣಿದರು; ಕುಳಿತು ಕೆಳತನಕ ಜರ್‍ರನೆ ಜಾರಿದರು. ಅಲ್ಲಲ್ಲಿ ಬೆಳೆದಿದ್ದ ನೇರಳೇ ಮರಗಳನ್ನು ಹತ್ತಿ ಹಣ್ಣು ಕಾಯಿಗಳೆನ್ನದೆ ಕೊಯ್ದರು. ತಿಂದರು. ಬಳಿಕ ನದಿಗೆ ಇಳಿದು ನೀರು ತೇಪಿಕೊಂಡರು; ಸ್ನಾನ ಮಾಡಿ ದರು; ಈಜು ಬಲ್ಲವರು ಈಜಾಡಿದರು. ಅಷ್ಟರಲ್ಲಿ ಬಿಸಿಲು ಚುರುಕಾ ಗುತ್ತ ಬಂತು. ಕಾಫಿ ಇಲ್ಲದ ಹಸಿ ಹೊಟ್ಟೆ ಸ್ವಲ್ಪ ಚುರುಚುರು ಅನ್ನಹತ್ತಿತು.

'ಇನ್ನೇನು, ಹೊಳೆಬುತ್ತಿಯನ್ನಿಲ್ಲಿಯೇ ಉಂಡು ಬಿಡೋಣ'ವೆಂದು ಒಬ್ಬ ಗೆಳೆಯ ಸೂಚಿಸಿದ. ಅಷ್ಟು ಹೇಳುತ್ತಲೇ ತಮ್ಮಯ್ಯ ಎಲೆ ಹಾಕಿ ಬಡಿಸಿದ. ಎಲ್ಲರೂ ಇಷ್ಟು ಬುತ್ತೀ ಹೊಡೆದು, ಹೊಟ್ಟೆ ಗಟ್ಟಿ ಮಾಡಿ ಕೊಂಡರು. ನದಿಯ ನೀರನ್ನೂ ಕುಡಿದರು. 'ಇನ್ನು ಹೊರಡಿರಣ್ಣಾ! ದುರ್ಗಕ್ಕೆ' ಅಂದರು. ಹೊರಟರು. ಬಡಿಸಿದ ತಮ್ಮಯ್ಯ ಬುತ್ತಿಯನ್ನು ಕೂತು ಉಣ್ಣಲಿಕ್ಕೆ ವ್ಯವಧಾನವಿಲ್ಲ. ಅವನು ಪಾತ್ರವನ್ನೇ ಎತ್ತಿಕೊಂಡು, ತಿನ್ನುತ್ತಾ, ತಿನ್ನುತ್ತಾ ಹೊಳೆ ದಾಟಿದ.

ನದಿ ದಾಟಿ, ದುರ್ಗವನ್ನು ಹತ್ತಲು ಆರಂಭಿಸಿದರು. ಹತ್ತುವ ಮಾರ್ಗ ಬಹಳ ಇಕ್ಕಟ್ಟಾಗಿತ್ತು. ಗಿಡಗುಂಟೆಗಳು ಬೆಳದಿತ್ತು. ಗೆಳೆಯರು ಒಬ್ಬರ ಹಿಂದೆ ಒಬ್ಬರು ಜಾಗ್ರತೆಯಿಂದ ನಡೆದರು. ತಿಂಡಿಯನ್ನು ಹೊತ್ತು ಕೊಂಡವರಿಗೆ ಕೈ ಕೊಟ್ಟು ಮೇಲೇರಿಸುತ್ತಿದ್ದರು. ಸ್ವಲ್ಪ ದೂರ ಹೀಗೆ ನಡೆದ ಮೇಲೆ ಮಾರ್ಗವು ಸ್ವಲ್ಪ ವಿಶಾಲವಾಗಿ ಕಲ್ಲಿನ ಮೆಟ್ಟಲುಗಳು ಸಿಕ್ಕಿದವು. ಅಷ್ಟು ಸಿಕ್ಕಿದ್ದೇ ತಡ! ಗೆಳೆಯರು ಬೇಗನೆ ನಡೆದು ದುರ್ಗ ವನ್ನು ಸೇರಿದರು. ಸೇರಿದ ಆನಂದಕ್ಕೆ ಒಮ್ಮೆ ಹಾರಿದರು.

ಒಳ ಹಾದಿಯಲ್ಲಿ ಕರೆದುಕೊಂಡು ಬಂದು, ಬೇಕಾದಷ್ಟು 'ಲೇವಡಿ' ಮಾಡಿಸಿಕೊಂಡ ತಿಮ್ಮಯ್ಯನೇ ಈಗಲೂ ಮುಂದಾಳಾಗಿ, ದುರ್ಗದ ವಿಶೇಷ ಗಳನ್ನು ತೋರಿಸ ತೊಡಗಿದನು. ಅವನು ಇತರರಂತೆ ಶಿವರಾಜಪುರದ ವಿದ್ಯಾರ್ಥಿ. ಅವನ ಊರಮನೆ ಈ ದುರ್ಗಕ್ಕೆ ಸಮೀಪ; 3 ಮೈಲುಗಳಾಚೆ. ಅವನಿಗೆ ಈ ದುರ್ಗದ ಪರಿಚಯವುಂಟು. ಅವನು ಅನೇಕ ಸಲ ಹಿಂದೆ ಇಲ್ಲಿಗೆ ಬಂದಿದ್ದ. ಗೆಳೆಯರು ಅವನ ಜತೆಯಲ್ಲಿ ಬೇಕಾದಷ್ಟು ಸುತ್ತಿದರು. ನೋಡುವುದನ್ನೆಲ್ಲ ನೋಡಿದರು. ನೋಡಿದುದನ್ನೇ ನೋಡಿದರು. ಕಣ್ಣು ತುಂಬ ನೋಡಿ ನೋಡಿ ದಣಿದರು.

ಅವರು ನೋಡಿದುದೇನು? ಜರಿದು ಬಿದ್ದ ಕೋಟೆಯ ಕಲ್ಲು ಗೋಡೆ. ಗೋಡೆಯೊಳಗೆ ಕಾವಲುಗಾರನ ಗೂಡು. ಅರಮನೆಯ ನೆಲಗಟ್ಟು. ಗದ್ದಿ ಗೆಯ ಚೌಕಟ್ಟು. ಅಲ್ಲಿಂದ, ಒಂದೆರಡು ಬೀದಿಗಳು; ಚರಂಡಿ;—ಅಲ್ಲೀಗ ಗಿಡಗಳು ಬೆಳೆದಿವೆ; ಮಣ್ಣು ತುಂಬಿದೆ. ಅಲ್ಲಿಂದ ವರಾಹ ಮೂರ್ತಿಯ ದೇವಸ್ಥಾನ. ಅಲ್ಲಿ ಗರ್ಭಗುಡಿಯೂ, ದೇವರೂ ಮಾತ್ರ ಉಂಟು; ಅವು ಕಲ್ಲಿನವು. ಮಿಕ್ಕದ್ದೆಲ್ಲ ಬಿದ್ದು ಹೋಗಿದೆ. ಅದಕ್ಕೆ ಸಮೀಪದಲ್ಲಿ ಒಂದು ಹಾಳು ಬಾವಿ; ಪೊಟ್ಟು ಕೆರೆ. ಕೆರೆಯ ಸೋಪಾನಗಳಲ್ಲಿ ಒಂದೆರಡು ಮುರುಕು ಮೆಟ್ಟಲು ಮಾತ್ರವೇ ಇವೆ. ಇನ್ನೂ ಮುಂದೆ,—ಕೆಲವು ನಿವೇ ಶನಗಳು; ಕಲ್ಲು ಮಂಚಗಳು; ಮಣ್ಣು ತುಂಬಿ ಹೋದ ಬಾವಿಗಳು; ಮಹಾಂಕಾಳಿಯ, ವೀರ ಹನುಮಂತನ ಮೂರ್ತಿಗಳು ಒಂದೆರಡು:—

ಮೂರ್ತಿ ಮಾತ್ರ. ಮತ್ತೇನೂ ಇಲ್ಲ;—ಬಿಸಿಲಲ್ಲಿ ಒಣಗಿ, ಮಳೆಯಲ್ಲಿ ನೆನೆಯುತ್ತ ನಿಂತಿವೆ.

ದುರ್ಗವು ಸಾಧಾರಣ ಅರ್ಧ ಮೈಲು ವಿಸ್ತಾರವಿರಬಹುದು. ದುರ್ಗದಲ್ಲಿ ಗಿಡ, ಮರ, ಬಳ್ಳಿ, ಪೊದೆ, ಹುತ್ತಗಳು ಪೂರಾ ಬೆಳೆದಿವೆ. ಕೆಲವು ಕಡೆ ಕಾಲು ಹಾಕುವುದೇ ಕಷ್ಟ. ಎಲ್ಲಿ ಹಾವೋ, ಎಲ್ಲಿ ಚೇಳೋ ಗೊತ್ತಿಲ್ಲ. ದುರ್ಗದ ಪಕ್ಕದಲ್ಲಿ ನಿಂತು ನೋಡಿದರೆ, ಖಂದಕವು ಕಂಡುಬರುತ್ತದೆ. ಖಂದಕವು ಬಹಳ ಆಳ. ನೋಡಿದರೆ ತಲೆ ಕಣ್ಣುಗಳು ತಿರುಗುತ್ತವೆ. ಅಲ್ಲಿ ಪೂರ್ವದಲ್ಲಿ ಅಪರಾಧಿಗಳನ್ನು ತಂದು ಈ ಖಂದಕಕ್ಕೆ ದೊಬ್ಬಿ ಬಿಡುತ್ತಿದ್ದರಂತೆ. ಈ ಖಂದಕದ ಆಚೆಗೇ ದೊಡ್ಡದೊಂದು ಪರ್ವತ. ಈ ಪರ್ವತದಲ್ಲಿಯೇ ನದಿಯ ಉತ್ಪತ್ತಿ. ನದಿ ಅಲ್ಲಿಂದ ಹರಿದು ಬರುವುದು ಇಲ್ಲಿಗೆ ಕೊಂಚ ಮಟ್ಟಿಗೆ ತೋರುತಿತ್ತು.

ಗೆಳೆಯರು ದುರ್ಗದಲ್ಲಿ ಸುತ್ತಿ, ಸುತ್ತಿ, ಸೃಷ್ಟಿಯ ಸೌಂದರ್ಯವನ್ನು ನೋಡಿ, ವಿಶಾಲವಾದ ಒಂದು ಆಲದ ಮರದ ಕೆಳಗೆ ಬಂದು ಕುಳಿತರು. ಬಿಸಿಲು ಅಲ್ಲಿ ಬೆಳದಿಂಗಳಿನ ಹಾಗೆ ತಂಪಾಗಿತ್ತು. ಮೇಲೆ ನಿರ್ಮಲವಾದ ಆಕಾಶ; ಕೆಳಗೆ ನಿರ್ಮಲವಾದ ನದಿ. ಮಧ್ಯದಲ್ಲಿ ಈ ದುರ್ಗದಲ್ಲಿ ಈ ಹುಡುಗರು.

**ರಾಮಸ್ವಾಮಿ:**—'ಅಲ್ಲವೋ! ಹಾಸನ್ ಟೋಪಿ! ನಿಮ್ಮ ಕಡೆ ದಶಾವತಾರದ ಆಟ ಬಹಳ ಸೊಗಸು ಅನ್ನುತ್ತಾರಲ್ಲ! ಎಲ್ಲಿ? ಅದರ ಮಾದರಿಯನ್ನು ಈಗ ತೋರಿಸಬಾರದೇ?

**ತಮ್ಮ:**—'ತೋರಿಸಬಹುದಿತ್ತಲ್ಲ! ತಕ್ಕ ಜನರಿಲ್ಲ; ಕುಣಿಯಲಿಕ್ಕೆ; ಅರ್ಧ ಹೇಳಲಿಕ್ಕೆ'.

**ರಾ:**—'ಜನಕ್ಕೇನು ಕಡಿಮೆಯಯ್ಯ! ಇಗೋ, ನಾಣಿ, ಕಿಟ್ಟು, ಮಂಜಪ್ಪ, ಮಲ್ಲಾರಿ, ಸುಬ್ಬ ಇವರೆಲ್ಲ ನಿಮ್ಮೂರ ಕಡೆಯವರೇ. ಅವರಿಗೆ ದಶಾವತಾರದ ಪರಿಚಯ ಚೆನ್ನಾಗಿರಬೇಕು.'

**ನಾಣಿ**:—'ಉಂಟು; ಉಂಟು; ಬೇಕಾದರೆ ಈಗಲೇ ವೇಷ ಕಟ್ಟಿ ಒಂದು ಆಟವಾಡಿ ತೋರಿಸೋಣ.'

**ಕಿಟ್ಟು**:—'ಪ್ರಸಂಗ ಯಾವುದು?'

**ಸುಬ್ಬ**:—'ದೊಡ್ಡ ಪ್ರಸಂಗ ಬೇಕಿಲ್ಲ. ಜನವೂ ಸಾಲದು; ಕಾಲವೂ ಸಾಲದು; ಅಲ್ಲದೆ ಬೇಕಾದ ಬಟ್ಟೆ, ಬರೆ, ಬಣ್ಣ ಗಿಣ್ಣಗಳೊಂದನ್ನೂ ನಾವು ತಂದಿಲ್ಲ.'

**ಮಲ್ಲಾರಿ**:—'ಹಾಗಾದರೆ 'ಬಕನ ವಧೆ'ಯನ್ನೇ ಆಡುವ. ಚಿಕ್ಕದಾಗಿದೆ. ಆ ಭಾಗವನ್ನೇ ಈಗ ಪಂಡಿತರೂ ನಮಗೆ ಕ್ಲಾಸಿನಲ್ಲಿ ಕಲಿಸುತ್ತಿದ್ದಾರೆ. ಆದ್ದರಿಂದ ಅರ್ಥ ಹೇಳುವುದು ಸುಲಭ. ಅಲ್ಲದೆ ಅದಕ್ಕೆ ಬ್ರಾಹ್ಮಣರ ವೇಷಗಳಾದರೇ ಸಾಕು. ನಮ್ಮಲ್ಲೆಲ್ಲ ಪಂಚೆಗಳಿವೆ. ವೇಷವನ್ನು ಸುಲಭವಾಗಿ ಹಾಕಬಹುದು. ಬಕನ ಮಟ್ಟಿಗೆ ಬಣ್ಣವಾಗಬೇಕು. ಕಿರೀಟವಾಗಬೇಕು. ಅದೊಂದು ಕಷ್ಟ.'

**ಕಿ**:—'ಕಷ್ಟವೇನು ಬಂತು? ಕಿರೀಟಕ್ಕೆ ಬುತ್ತಿ ತಂದ ದೊಡ್ಡ ಕೌಳಿಗೆ ಇದೆ. ತಲೆಗೆ ಕೌಚಿ ಹಾಕಿಕೊಂಡರಾಯಿತು. ಬಣ್ಣಕ್ಕೆ ಒಣಗಿದ ಎಲೆಗಳನ್ನೂ, ಕುಂಟೆಗಳನ್ನೂ ಸುಟ್ಟು ಬೂದಿ, ಕೆಂಡ ಮಾಡಿದರಾಯಿತು. ಇನ್ನು ನನ್ನಲ್ಲಿ ಸೀಮೆ ಸುಣ್ಣವಿದೆ. ಕೆಂಪು ಶಾಯಿಯ 'ಫೌಂಟನ್‌ಪೇನಿದೆ.' ರಾಕ್ಷಸನ ಬಣ್ಣಕ್ಕೆ, ಕೆಂಪು, ಕಪ್ಪು, ಬಿಳಿದು ಮೂರು ಬಣ್ಣ ಸಾಲದೆ?

**ಮ**:—'ಸಾಕು; ಯಥೇಷ್ಟ. ಇನ್ನು ವೇಷಗಳನ್ನು ಹಂಚುವ ಕೆಲಸವಾಗಲಿ.'

**ನಾ**:—'ಮಲ್ಲಾರಿ, ನಾನು ಧರ್ಮರಾಯ; ಅರ್ಜುನ; ಮಂಜಪ್ಪ ಭೀಮ; ನಕುಲ ಸಹದೇವರ ವೇಷ ಬೇಡ. ಕುಂತಿ ಅಯ್ಯಣ್ಣ. ಬಕಾಸುರ ಮಲ್ಲಿಕಾರ್ಜುನ. ಬ್ರಾಹ್ಮಣ ನಂಜುಂಡ. ತಮ್ಮು ಭಾಗವತ.'

**ಮಂಜಪ್ಪ**:—'ಭೀಮನಿಗೆ ಭಂಡಿ ಬೇಕು; ತಿಂಡಿ ಬೇಕು.'

ನಾ:—'ತಿಂಡಿ ಬೇಕಾದಷ್ಟು ಇದೆ, ಕಣೋ! ಭಂಡಿ ಆ ಮೇಲೆ ಮಾಡೋಣವಂತೆ.'

ರಾ:-'ಹಾಗಾದರೆ ಹೊರಡಿ; ಬೇಕಾದುದನ್ನೆಲ್ಲ ಸಿದ್ಧ ಮಾಡಿ. ಬೇಗ!'

---

## ಹದಿನಾಲ್ಕನೆಯ ಅಧ್ಯಾಯ.

### ದಶಾವತಾರ.

ಹುಡುಗರು ಆಟದ ಸಿದ್ಧತೆಗೆ ಆರಂಭಿಸಿದರು. ಎಲೆ, ಕಟ್ಟಿಗೆ ಸುಟ್ಟು ಬೂದಿ, ಕೆಂಡ ಮಾಡಿದರು. ನದಿಯಿಂದ ತಂಬಿಗೆಯಲ್ಲಿ ತುಂಬಿಕೊಂಡು ಬಂದಿದ್ದ ನೀರಿನಿಂದ ಕೆಂಡವನ್ನೂ, ಸೀಮೆ ಸುಣ್ಣವನ್ನೂ ಅರೆದು ಬಣ್ಣ ಮಾಡಿದರು. ವೇಷದ ಸ್ಥಳವನ್ನು ಗೊತ್ತುಮಾಡಿದರು. ರಂಗಸ್ಥಳದ ಸುತ್ತಲೂ ನಾಲ್ಕು ಗೂಟ ಹೂಳಿ ಸೊಪ್ಪು ಕಟ್ಟಿದರು. ವೇಷಕ್ಕೆ ಕೂತರು. ಬ್ರಾಹ್ಮಣರ ಕುಂತಿಯು ವೇಷಗಳು ಕ್ಷಣದೊಳಗೆ ಮುಗಿಯಿತು. 'ಹೋಗಿ, ನಡೆಯಿರಿ, ಪ್ರಸಂಗ ಆರಂಭವಾಗಲಿ: ನನ್ನ ವೇಷ ಬರುವುದು ಕೊನೆಗೆ, ಅಷ್ಟರಲ್ಲಿ ನನ್ನ ಬಣ್ಣ ಪೂರೈಸಿ ಹೋಗುತ್ತದೆ. ಭಾಗವತರು ಪದಗಳನ್ನು ಮಾತ್ರ ಗಿಡ್ಡ ಮಾಡಿ ಮುಗಿಸಬಾರದು' ಎಂದು ಮಲ್ಲಿಕಾರ್ಜುನ ಹೇಳಿದ.

ತಮ್ಮು ಬಂದು ರಂಗಸ್ಥಳದಲ್ಲಿ ನಿಂತ. ಕೈಯಲ್ಲಿ ಒಂದು ಹರಿವಾಣ, ಕೋಲು,—ತಾಳಕ್ಕೆ. ಅವನು ಹಾಡಲು ತೊಡಗಿದ. ಬ್ರಾಹ್ಮಣನ ವೇಷ ಬಂತು. ಅವನಿಗೂ, ಕುಂತಿಗೂ ಸಂವಾದ ಆಯಿತು. ಭೀಮನನ್ನು ಬಕಾಸುರನ ಬಳಿಗೆ ಕಳುಹಿಸಲು ಕುಂತಿಯೊಪ್ಪಿದಳು. ಆ ಮೇಲೆ ಭೀಮನ ಒಡ್ಡೋಲಗ. ಒಡ್ಡೋಲಗಕ್ಕೆ ಚಂಡೆ ಮದ್ದಳೆಗಳಿಲ್ಲ. ತಿಂಡಿ ತಂದ ಚರಿಗೆ, ಚಿಮಿಣಿ ಎಣ್ಣೆ ಡಬ್ಬ ಇವುಗಳ ಗಲಾಟೆಯೇ ಗಲಾಟೆ. ಭೀಮ ಒಡ್ಡೋಲಗದಲ್ಲಿ ಯದ್ವಾತದ್ವಾ ಕುಣಿದ. ಅಷ್ಟರಲ್ಲಿ ಭಾಗವತರಿಗೆ ಪದ ಮರೆತು ಹೋಗಿ 'ಏನಯ್ಯಾ! ಪವನಜನೇ' ಎಂದು ಇನ್ನು ಯಾವ ಪ್ರಸಂಗವನ್ನೋ

ಎತ್ತಿದರು. ಭೀಮ ರೇಗಿ, 'ಭಾಗವತರೇ, ಯಾವ ಪ್ರಸಂಗದ ಪದ ಯಾವ ಪ್ರಸಂಗಕ್ಕೆ? ಅದು ಸಂಧಾನದ್ದು' ಎಂದು ಜಬರಿಸಿದ.

**ತಮ್ಮ:**—'ಅಯ್ಯಾ! ಸಂಧಾನದಲ್ಲಿಯೂ ಭೀಮನೇ ಬಕಾಸುರ ವಧೆಯಲ್ಲಿಯೂ ಭೀಮನೇ. ನಾನು ಈಗ ಹೇಳಿದ ಪದ್ಯದಲ್ಲಿಯಾದರೂ ಕಾಮನಲ್ಲ; ಅದೇ ಭೀಮನೇ—ಪವನಜ ಅಂದರೆ. ಪದ ಯಾವದಾದರೇನು? ಕಥೆಗೆ ಸರಿಯಾಗಿ ಅರ್ಥ ಹೇಳಿದರೆ ಸರಿ; ಲೆಕ್ಕಾಚಾರ ಅಷ್ಟೇ.'

ಸಭೆಯಲ್ಲಿ ಗೋಪು, ರಾಮಸ್ವಾಮಿ ಮೊದಲಾಗಿ 4-5 ಮಂದಿ ಕುಳಿತು ನೋಡುತಿದ್ದರು. ಗೋಪು, ಭೀಮ—ಭಾಗವತರ ಮಾತು ಕೇಳಿ, 'ಪ್ರಸಂಗದಲ್ಲಿ ಭೀಮ ಭಾಗವತರೊಳಗೆ ಹೀಗೂ ಒಂದು ಕಚ್ಚಾಟದ ಸಂವಾದವುಂಟೇ? ಥೂ! ನಿಮ್ಮ ಸುಡುಗಾಡು ದಶಾವತಾರಕ್ಕೆ ಬೆಂಕೀ ಹಾಕು!' ಎಂದು ನಕ್ಕನು ರಾಮಸ್ವಾಮಿ 'ಕಥೆ ಮುಂದೆ ಸಾಗಲಿ!' ಅಂದನು.

ಪದವೂ, ಅರ್ಥವೂ ಮುಂದೆ ಸಾಗಿತು. ಭೀಮನ ಭಂಡಿಗೆ ಕಟ್ಟಲು 2 ಕೋಣಗಳು ಬಂತು. ಇಬ್ಬರು ಹುಡುಗರು ಒಗ್ಗಿ ಕೈ ಕಾಲಿನಲ್ಲಿ ನಡೆಯುತ್ತಾ ರಂಗಸ್ಥಳಕ್ಕೆ ಬಂದರು. ಅವರೇ ಕೋಣನ ಪ್ರತಿನಿಧಿಗಳು. ಕ್ರಮೇಣ ಬಂಡಿ ಇಲ್ಲದೆ ಬಂಡಿಯ ತಿಂಡಿಯೂ ಬಂತು. ಮಧ್ಯಾಹ್ನದ ಫಲಾಹಾರಕ್ಕಾಗಿ ಉಳಿಸಿದ್ದ ಯಾವತ್ತು ತಿಂಡಿಯೂ ರಂಗಸ್ಥಳದಲ್ಲಿ 'ಹಾಜರಾ'ಯಿತು. ಭೀಮ ಆ ತಿಂಡಿಯ ಪಾತ್ರವನ್ನು ಕೋಣಗಳ ಬೆನ್ನು ಮೇಲೆ ಹೇರಿದ. ಅಷ್ಟರಲ್ಲಿ ಭಾಗವತರು ತಿಂಡಿಯನ್ನು ವರ್ಣಿಸುವ ಪದ ಹೇಳಿದರು. ಭೀಮ 'ಇಲ್ಲಿ ಉಪ್ಪಿಟ್ಟು, ದೋಸೆ, ಅವಲಕ್ಕಿ, ಬಾಳೆಹಣ್ಣು ಇಷ್ಟು ಮಾತ್ರವಿದೆ ಭಾಗವತರ ಪದದಲ್ಲಿ ಅದೊಂದೂ ಇಲ್ಲ. ಗುಳೋರಿಗೆ, ಚಕ್ಕುಲಿ ಎಂದು ಇಲ್ಲಿ ಕಾಣದ ನೂರಾರು ಬಗೆಯವೆ. ಇದಕ್ಕೆ ಅರ್ಥ ಹೇಗೆ ಹೇಳಬೇಕು?' ಎಂದು ಕೂಗಿದ.

**ಗೋಪು:**—'ತಿಂಡಿಯ ಹೆಸರು ಇಲ್ಲಿ ಇದ್ದದ್ದೇ ಆಗಬೇಕೆಂದಿಲ್ಲ. ಪದದಲ್ಲಿ ಇದ್ದದ್ದಾದರೂ ಏಕೆ? ಏನಾದರೂ ಹೇಳುತ್ತಾ ಹೋಗು.

'ಕರದ ಅವಲಕ್ಕಿ, ಹುರಿದ ಅವಲಕ್ಕಿ, ಕುಟ್ಟವಲಕಿ, ಚಟ್ನೀ ಅವಲಕ್ಕಿ, ಸೀಂ ಅವಲಕ್ಕಿ, ಕಾರದ ಅವಲಕ್ಕಿ, ಹುಣಿಸೆಹಣ್ಣು ಅವಲಕ್ಕಿ' ಎಂದು ಉದ್ದಕ್ಕೆ ಹೇಳಿ ಬಿಡು. ಸಾಕು.'

ಭೀಮ ಹಾಗೇ ಬಾಯಿಗೆ ಬಂದ ತಿಂಡಿಯ ಹೆಸರು ಹೇಳುತ್ತಾ, ಹೇಳುತ್ತಾ ಮೆಲ್ಲಗೆ ತಿಂಡಿಗೆ ಕೈ ಕೊಟ್ಟ. ಒಂದೊಂದೇ ತಿಂದು ಮುಗಿಸಲು ನೋಡಿದ. ಅವನ ಹೊಟ್ಟೆ ತಿಂದು ತಿಂದು ಪೀಪಾಯಿಯ ಗಾತ್ರ ವಾಯಿತು. ಸಭೆಯಲ್ಲಿದ್ದವರು 'ಎಲಾ! ಎಲಾ! ತಿಂಡಿ ಪೂರಾ ತಿಂದು ಹಾಕಿಬಿಡಬೇಡವೋ! ಆಟ ಮುಗಿದ ಮೇಲೆ ನಮಗೂ ಫಲಹಾರಕ್ಕೆ ಬೇಕು' ಎಂದು ಕೂಗಿದರು.

**ಭೀಮ:**—'ಅದೆಲ್ಲಾ ನನಗೆ ಗೊತ್ತಿಲ್ಲ. ಪ್ರಸಂಗದಲ್ಲಿ ಇಷ್ಟು ತಿನ್ನು, ಇಷ್ಟು ಬಿಡು ಎಂದು ಭೀಮನಿಗೆ ಯಾರೂ ಹೇಳಿದ ಪದವಿಲ್ಲ. ಒಕಾಸುರನ ವಧೆಯ ಭೀಮ ಭಂಡಿಯ ಮೇಲಿದ್ದ ಎಲ್ಲಾ ತಿಂಡಿಯನ್ನು ತಿಂದು ಮುಗಿಸಿದ್ದಾನೆ. ಅದರಂತೆ ನಾನೂ ಮಾಡುತ್ತೇನೆ.'

**ರಾಮ:**—'ಅಲ್ಲವೋ ಮಹಾರಾಯ! ತನ್ನಂತೆ ಮಿಕ್ಕ ಪಾಂಡವರೂ ಕೊಂಚ ತಿನ್ನಲೆಂದು, ಭೀಮ ಒಂದಿಷ್ಟು ತಿಂಡಿಯನ್ನು ಭಂಡಿಯಿಂದ ಮನೆಗೆ ತಕ್ಕೊಂಡು ಹೋದ ಹಾಗೆ ಅರ್ಥ ಹೇಳೋ! ಹಾಗೇ ಈ ತಿಂಡಿಯ ಸ್ವಲ್ಪ ಭಾಗವನ್ನೂ ನಮಗಾಗಿ ಕಟ್ಟಿ ಆಚೆಗೆ ಇಟ್ಟುಬಿಡೋ!'

**ಭೀ:**—'ಭೀಮ ತಾನೇ ತಿಂದದ್ದಲ್ಲದೆ ಬೇರೆಯವರಿಗೆ ಕೊಟ್ಟದ್ದಿಲ್ಲ. ಹಾಗೆ ತಿನ್ನಲು ಬಿಡುವುದಿಲ್ಲವಾದರೆ, ಇಗೋ, ನನ್ನ ವೇಷವನ್ನು ಇಲ್ಲಿಯೇ ಕಳಚಿ ಹಾಕುತ್ತೇನೆ.'

**ರಾ:**—'ಹಾಕು, ನಡೆ, ಸಾಕು ನಿನ್ನ ವೇಷ.' ಎಂದು ಉಳಿದ ತಿಂಡಿಯನ್ನು ಬದಿಗೆ ಇಟ್ಟು, 'ಎಲಾ! ಗಿರಿಯಣ್ಣ! ಹೋಗೋ! ನೀನು ಭೀಮನ ವೇಷ ಹಾಕಿಕೊಂಡು ಬಾ! ಆದರೆ ತಿಂಡಿಯನ್ನೇನೂ ಮುಟ್ಟ ಬೇಡ, ಕಂಡೆಯಾ?' ಎಂದು ಮೊದಲೇ 'ಕರಾರು' ಮಾಡಿದನು.

ಹಳೇ ಭೀಮ 'ವಜಾ' ಆಯಿತು. ಹೊಸ ಭೀಮನ ವೇಷ ಕೂಡಲೇ ಬಂತು. ಬಕಾಸುರನ ಒಡ್ಡೋಲಗವೂ ಆಯ್ತು. ಇದ್ದುದರಲ್ಲಿ ಮಲ್ಲಿಕಾರ್ಜುನ ದೊಡ್ಡ ಬಲಿಷ್ಠ ಹುಡುಗ; ಬೆಳವಣಿಗೆ ಚೆನ್ನಾಗಿತ್ತು. ಅವನು ಕೆಂಪು, ಕಪ್ಪು, ಬಿಳೀ ಬಣ್ಣಗಳನ್ನು ತಕ್ಕಂತೆ ಮುಖಕ್ಕೂ, ಕಣ್ಣಿಗೂ ಹಚ್ಚಿಕೊಂಡು, ಮೀಸೆಯನ್ನು ಮಸಿಯಲ್ಲಿ ಬರೆದುಕೊಂಡಿದ್ದ. ತಲೆಗೆ ಕೌಳಿಗೆಯನ್ನು ಕೌಚಿ ಹಾಕಿಕೊಂಡಿದ್ದ. ಮೈಗೆಲ್ಲ ಬಳ್ಳಿಗಳನ್ನೂ, ಸೊಪ್ಪುಸದೆಗಳನ್ನೂ ಕಟ್ಟಿಕೊಂಡಿದ್ದ. ಆರ್ಭಟಿಸುತ್ತಾ ರಂಗಸ್ಥಳಕ್ಕೆ ಬಂದ. 'ಭಲೆ! ಬಕಾಸುರ!' ಎಂದು,—ವೇಷವನ್ನೂ, ಆರ್ಭಟವನ್ನೂ ಕಂಡು, ಸಂತೋಷಗೊಂಡು ಸಭಿಕರು ಚಪ್ಪಾಳೆ ತಟ್ಟಿದರು.

ಭೀಮನಿಗೂ, ಬಕನಿಗೂ ಯುದ್ಧವು ಮೊದಲಾಯಿತು. ಯುದ್ಧವೇ ಯುದ್ಧ. ಭೀಮನೂ, ಬಕನೂ ಈಗ ರಂಗಸ್ಥಳದಲ್ಲಿ ಇಲ್ಲ. ರಂಗಸ್ಥಳಕ್ಕೆ ಸ್ವಲ್ಪ ದೂರದಲ್ಲಿ ದಟ್ಟವಾಗಿ ಬೆಳೆದುಕೊಂಡಿದ್ದ ಮರಗಳ ಮಧ್ಯದಲ್ಲಿ ಇದ್ದರು. ಒಬ್ಬರೊಡನೆ ಒಬ್ಬರು ಕರಡಿಗಳ ಹಾಗೆ ಕಾದಾಡುತ್ತಿದ್ದರು. ಆ ಮೇಲೆ, ಪೊದೆಯೊಳಗೆ ನುಗ್ಗಿ, ಬಂಡೆಯ ಮೇಲೇರಿ, ಗಿಡಗಳ ಸಂಧಿಯಿಂದ ಹೊರಟು ಒಬ್ಬರನ್ನೊಬ್ಬರು ಹಿಂಬಾಲಿಸಿಕೊಂಡು ಓಡಲು ಆರಂಭಿಸಿದರು. ಅವರು ಓಡುವುದನ್ನು ಕಂಡು, ಭಾಗವತರೂ ಪದ ಹೇಳುತ್ತಾ ಓಡಿದರು. ಸಭಿಕರೂ ಓಡಿದರು.

ಭೀಮ—ಬಕಾಸುರರ ಯುದ್ಧ ಚಮತ್ಕಾರವಾಗಿ ನಡೆಯಿತು. ಅವರಿಬ್ಬರೂ ಗಿಡಗಳನ್ನು ಕಿತ್ತು ಹೊಡೆದುಕೊಳ್ಳುತ್ತಾ, ಮರದ ರೆಂಬೆಗಳನ್ನು ಮುರಿದು ಬಡಿದುಕೊಳ್ಳುತ್ತಾ, ಅಡಿಗಡಿಗೆ ಹೂಂಕರಿಸುತ್ತಾ, ಭುಜ ತಟ್ಟಿಕೊಳ್ಳುತ್ತಾ, ಮೈಮೇಲೆ ಪ್ರಜ್ಞೆ ಇಲ್ಲದಂತೆ ಯುದ್ಧ ಮಾಡಿದರು. ಅಂದು ವನಮಧ್ಯದಲ್ಲಿ ಆದ ಭೀಮ–ಬಕಾಸುರರ ಯುದ್ಧವೇ, ಇಂದು ಇಲ್ಲಿ ಕಣ್ಣ ಮುಂದೆ ಪ್ರತ್ಯಕ್ಷವಾಗಿ ನಡೆಯುತ್ತಿದೆ ಎಂಬ ಭ್ರಾಂತಿಯನ್ನು ಹುಟ್ಟಿಸಿದರು. ಹುಡುಗರು ಬೆರಗಾದರು. ಇದು ಆಟ, ಅಭಿನಯವೆಂಬುದನ್ನು ತೀರಾ ಮರೆತು ಬಿಟ್ಟರು.

ಸ್ವಲ್ಪ ಹೊತ್ತಿನಲ್ಲಿ ಭೀಮ–ಬಕಾಸುರರಲ್ಲಿ ಮಲ್ಲಕಾಳಗವು ಆರಂಭಿಸಿ, ಬಲಿಷ್ಠನಾದ ಬಕಾಸುರನು ಭೀಮನನ್ನು ಕೆಡವಿಬಿಟ್ಟನು. ಅವನ ಎದೆಯ ಮೇಲೆ ಕುಳಿತನು. ಭೀಮನಿಗೆ ಉಸಿರು ಬಿಡದಂತಾಯಿತು. ಅವನು ಕೂಗಿದನು 'ಬಿಡಿಸಿ, ಬಿಡಿಸಿ!' ಎಂದು.

ಭಾಗವತರೂ, ಸಭಿಕರೂ ಗಾಬರಿಯಿಂದ ಓಡಿ ಹೋಗಿ, ಬಕಾಸುರನನ್ನು ಈಚೆಗೆ ಎಳೆದು ಹಾಕಿದರು. ಭೀಮ ಸೇಂಕುತ್ತಾ ಮೆಲ್ಲಗೆ ಎದ್ದ. 'ಅಯ್ಯೋ! ಎಂಥಾ ರಣಹೇಡಿ ಭೀಮನೋ ನೀನು? ನೀನು ಸೋತು ಪ್ರಸಂಗದ 'ಮಜಾ'ವನ್ನೇ ಕೆಡಿಸಿದೆ' ಎಂದು ರಾಮಸ್ವಾಮಿ ಹೇಳಿದ.

'ಹೌದು; ತಿಂಡಿ ತಿಂದ ಭಂಡೀ ಭೀಮನಾದರೆ ಬಕಾಸುರನನ್ನು ಗೆಲ್ಲ ಬೇಕು. ತಿಂಡಿ ತಿನ್ನದ ಬರಗೆಟ್ಟ ಭೀಮನೂ ಬಕಾಸುರನನ್ನು ಗೆಲ್ಲಬೇಕೇ?' ಎಂದು ಗಿರಿಯಣ್ಣ ಬಾಯಿ ಹಾರಿಸಿದ.

ಆಟ ಮುಗಿಯಿತು. ದಿನವೆಲ್ಲ ಊಟವಿಲ್ಲದೆ ತಿಂಡಿಯ ಶೇಷವನ್ನೆಲ್ಲ ಗಬಗಬನೆ ತಿಂದದ್ದಾಯಿತು. ದುರ್ಗ ಇಳಿದು, ಹೊಳೆ ದಾಟಿ, ಸಂಜೆಗೆ ಪುನಃ ಶಿವರಾಜಪುರ,—ಅದೋ! ಶಿವರಾಜಪುರದ ಬೀದಿಯಲ್ಲಿ ಅವರು ಮೆಲ್ಲಗೆ ಬರುತ್ತಿದ್ದಾರೆ! ಬಾಡಿಗೆ ಕುದುರೆ ಮುಖ ಮಾಡಿಕೊಂಡು!

---

## ಹದಿನೈದನೆಯ ಅಧ್ಯಾಯ.

## ಪರೀಕ್ಷೆಯ ನಿರೀಕ್ಷೆ.

ವರ್ಷಾವಧಿಯ ಪರೀಕ್ಷೆ ಹತ್ತಿರ ಬಂತು. ಈ ವರ್ಷ, ತಮ್ಮುವಿನ ಮನೆಯ ವ್ಯಾಸಂಗವು ಕಳೆದ ವರ್ಷದಂತೆ ಕ್ರಮವಾಗಿ ನಡೆದಿರಲಿಲ್ಲ. ಆ ಕಾರಣ ರಾಮಸ್ವಾಮಿಯ ಮಾತನ್ನು ನಂಬಿಕೊಂಡು ತಾನು ಕೆಟ್ಟೆನೋ ಹೇಗೋ ಎಂಬ ಅಳುಕು ತಮ್ಮುವನ್ನು ಆಗಾಗ ಬಾಧಿಸುತ್ತಿತ್ತು. 'ಸ್ಪೋರ್ಟಿನಲ್ಲಿ' ಗೆಲ್ಲಬೇಕೆಂದು ಕೆಲವು ದಿನಗಳೂ, ಗೆದ್ದಿತೆಂಬ ಸಂತೋಷ

ದಲ್ಲಿ ಕೆಲವು ದಿನಗಳೂ, ವರ್ಷಾವಧಿಯ ಪರೀಕ್ಷಾ ಸಮಯದಲ್ಲಿಯೇ ಕಳೆದು ಹೋದುದು ದೊಡ್ಡ ನಷ್ಟವೆಂದು ಈಗ ತಮ್ಮುಗೆ ತೋರಿತು. ಹಗಲು ರಾತ್ರಿ ಕುಳಿತು ಓದಿದರೂ, ಇದುವರೆಗೆ ಆದ ಪಾಠಗಳನ್ನು ಆವರ್ತನ ಮಾಡುವುದೇ ಕಷ್ಟವಾಗಿರುವಾಗ, ಇನ್ನು ಮುಂದೆ ನಡೆಯುವ ಹೊಸ ಪಾಠಗಳನ್ನು ಯಾವಾಗ ಗಟ್ಟಿಮಾಡುವುದೆಂದು ಅವನಿಗೆ ತಿಳಿಯ ದಾಯಿತು. ಈ ಪರೀಕ್ಷೆಯಲ್ಲಿ ಅವನು 'ಫೈಲ್' ಆದರೆ ಅವನ ಮುಂದಿನ ವಿದ್ಯಾಭ್ಯಾಸದ ಅವಸ್ಥೆಯೇನು? ಇವನನ್ನೇ ನಂಬಿಕೊಂಡು, ಇವನಿಗಾಗಿ ಜಮೀನು ಈಡು ಮಾಡಿ ಓದಿಸುತ್ತಿರುವ ಆ ತಂದೆಯ, ಆ ಇಡೀ ಕುಟುಂಬದ ಗತಿಯೇನು?

ತಮ್ಮು ಕಳೆದು ಹೋದ ಸಮಯದ ವಿಷಯದಲ್ಲಿ ಎಷ್ಟೋ ಪಶ್ಚಾತ್ತಾಪ ಪಟ್ಟ. ಆದರೆ ಏನು ಫಲ? ಹೋದ ಸಮಯವು ಹಿಂದೆ ಬರುವುದೇ? ಇಲ್ಲ! ಆದುದರಿಂದ ಹೇಗಾದರೂ ಮಾಡಿ, ಒಂದು ತಿಂಗಳಲ್ಲಿ 6-8 ತಿಂಗಳ ಪಾಠಗಳನ್ನು ಓದಿ ಮುಗಿಸಿ, ಪರೀಕ್ಷೆಯಲ್ಲಿ 'ಪ್ಯಾಸ್' ಅಲ್ಲದಿದ್ದರೆ, 'ಪ್ರಮೋಷನ್'ನ್ನಾದರೂ ದೊರಕಿಸಿಕೊಳ್ಳುವ ಯತ್ನಮಾಡಬೇಕಂದು ಅವನು ನಿರ್ಧರಿಸಿದ. ಸಾಮಾನ್ಯವಾಗಿ ಎಷ್ಟೋ ಹುಡುಗರು ಹೀಗೆಯೇ ಮಾಡುವರು. ತಮ್ಮುವೂ ಈಗ ಅವರ ಸಾಲನ್ನೇ ಸೇರಿದ.

ತಿಂಗಳು ನಿಮಿಷದ ಹಾಗೆ ಕಳೆದು ಹೋಯಿತು. ಪರೀಕ್ಷೆಯ ಪ್ರಾರಂಭವು ನಾಳೆಯೇ. ಪರೀಕ್ಷೆಗಾಗಿ ಎಲ್ಲವೂ ಸಿದ್ಧವಾಗಿತ್ತು. ಕ್ಲಾಸುಗಳಿಂದ ಡೆಸ್ಕ್, ಬೆಂಚುಗಳನ್ನು ತೆಗೆದಿದ್ದರು. ಸಣ್ಣ ಮೇಜುಗಳನ್ನೂ, ಕುರ್ಚಿಗಳನ್ನೂ ಇಟ್ಟಿದ್ದರು;—ಒಬ್ಬೊಬ್ಬ ವಿದ್ಯಾರ್ಥಿಗೆ ಒಂದೊಂದರಂತೆ. ಪರೀಕ್ಷೆಯ ದಿನ, ತಮ್ಮು ತನ್ನ ನಂಬರಿನ ಮೇಜನ್ನು ಹುಡುಕಿ, ಅಲ್ಲಿ ಕುಳಿತನು. ಅವನ ಮೈ ಬೆವರಿತು. ಎದೆಯು ಗುಂಡಿಗೆಯು ಬಡಿದುಕೊಂಡಿತು. ಯಥಾಸಮಯದಲ್ಲಿ ಒಂದನೆಯ, ಎರಡನೆಯ ಗಂಟೆ ಬಾರಿಸಿದುದೂ ಕೇಳಬಂತು. ಅದರೊಂದಿಗೆ ಮಾಸ್ತರರು ಪ್ರಶ್ನಾಪತ್ರಗಳನ್ನು

ಹಂಚುತ್ತ ಬಂದರು. ತಮ್ಮು ಪತ್ರವು ಸಿಕ್ಕಿದೊಡನೆ ಅತ್ಯಾತುರದಿಂದ ಓದಿ ನೋಡಿದನು. 'ಹೆಚ್ಚು ಮಾರ್ಕು ಸಿಕ್ಕದಿದ್ದರೂ ಪ್ಯಾಸಾಗಬಹುದೆಂದು ಅವನಿಗೆ ತೋರಿತು. ಮತ್ತಿನ ಎರಡು ಮೂರು ವಿಷಯಗಳ ಪ್ರಶ್ನಾಪತ್ರಗಳಲ್ಲಿಯೂ ಹಾಗೆಯೇ; 'ಪ್ಯಾಸಾಗಬಹುದೆಂದು' ತಮ್ಮುವಿಗೆ ನಂಬಿಕೆ. ಆದರೆ ಮರುದಿನದ ಲೆಕ್ಕದ ಪ್ರಶ್ನಾಪತ್ರ ಮಾತ್ರ ತಮ್ಮುವಿನ ಪ್ರಾಣ ತೆಗೆಯಿತು. ಅದು ಅವನಿಗೆ ನುಂಗಲಾರದ ತುತ್ತಾಯಿತು ತುಟಿ ಮೀರಿದ ಹಲ್ಲಾಯಿತು.

ನಾಲ್ಕು ಸಾರಿ ತಮ್ಮು ಪ್ರಶ್ನಾಪತ್ರ ಓದಿದ. ಅದರಲ್ಲಿನ ಒಂದು ಪ್ರಶ್ನೆಗಾದರೂ ಉತ್ತರ ಕೊಡುವುದು ತನ್ನಿಂದ ಸಾಧ್ಯವಿಲ್ಲವೆಂದು ತಮ್ಮು ಹೆದರಿದ. ಅವನು 'ಲೆಕ್ಕ' ಎಂದು ಬರೆದ; ಒಂದು ಕಾಗದದ ಮೇಲೆ ಏನೇನೋ ಅಂಕೆಗಳನ್ನು ಗೀಚಿದ; ಹೊಡೆದ; ಮೇಲೆ ಸ್ವಲ್ಪ ನೋಡಿದ; ಕೆಳಗೆ ನೆಲವನ್ನು ಸ್ವಲ್ಪ ಉಂಗುಷ್ಠದಿಂದ ಕೆರೆದ. ಉಗುಳು ನುಂಗಿದ. ತಲೆ ತುರಿಸಿಕೊಂಡ. ಇಷ್ಟರಲ್ಲಿ ಅರ್ಧಗಂಟೆ ಹೋಯಿತು. ಹೊಗೆಯಲ್ಲಿಟ್ಟ ಬದನೇ ಕಾಯಿಯಂತೆ ಅವನ ಮುಖ ಬಾಡಿತು.

ಚಕ್ರಪಾಣಿ ತಮ್ಮುವಿನ ಪಕ್ಕದಲ್ಲಿಯೇ ಕುಳಿತಿದ್ದ. ತಲೆ ಕೆಳಗೆ ಹಾಕಿಕೊಂಡು ಲೆಕ್ಕಗಳನ್ನು ಮಾಡುತ್ತಿದ್ದ. ಚಕ್ರಪಾಣಿ'ಯನ್ನು ಅನೇಕರು ದಪ್ಪ ತಲೆಯ 'ಮಡಡ' ನೆನ್ನುತ್ತಿದ್ದರು. ತಮ್ಮುವೂ ಅವನನ್ನು ಹಾಗೆಂದೇ ಭಾವಿಸಿ, ಅನೇಕ ಸಾರಿ ಮೂದಲಿಸಿ ಮಾತಾಡಿದ್ದ. ಕಳೆದ ವರ್ಷ, ಅವನಿಗೆ ತನ್ನಿಂದಲೂ ಬರೀ ಎರಡು ಮೂರು ಮಾರ್ಕುಗಳು ಮಾತ್ರ ಕಡಿಮೆ ಎಂಬುದು ಈಗ ತಮ್ಮುವಿಗೆ ನೆನಪಾಯಿತು. ಹಾಗೂ ತಾನೀಗ ಲೆಕ್ಕ ಮಾಡಲಾರದೆ ಕೈಕಟ್ಟಿ ಕುಳ್ಳಿರುವುದನ್ನೂ, ಅವನು ಸರಸರನೆ ಲೆಕ್ಕ ಮಾಡುತ್ತಿರುವುದನ್ನೂ ಕಂಡು ತಮ್ಮುಗೆ ಹೇಳಲಾರದಷ್ಟು ದುಃಖವೂ, ನಾಚಿಗೆಯೂ ಉಂಟಾಯಿತು. ಬುದ್ಧಿವಂತನೆಂಬ ಹೆಮ್ಮೆ ಎಲ್ಲಿಯೋ ಹಾರಿಹೋಯಿತು. ಚಕ್ರಪಾಣಿ ಎಲ್ಲಿಯಾದರೂ ಕ್ಲಾಸಿನಲ್ಲಿ ಮೊದಲನೆಯುವನಾದರೆ, ತಮ್ಮು ಅವನಿಗೆ ಹೇಗೆ ಮುಖ ತೋರಿಸಬಲ್ಲನು? ತಲೆ ಎತ್ತಿಯಾದರೂ ತಿರುಗ ಬಲ್ಲನೇ?

ಚಕ್ರಪಾಣಿ ಕೆಲವು ಲೆಕ್ಕಗಳನ್ನು ಕರಡು ಕಾಗದದಲ್ಲಿ ಮಾಡಿ ಪೂರೈಸಿ, ಈಗ ಅದನ್ನೇ ಒಳ್ಳೆಯ ಅಕ್ಷರದಲ್ಲಿ, ಸ್ಪಷ್ಟವಾದ ಅಂಕೆಗಳಲ್ಲಿ ಪ್ರತಿ ತೆಗೆಯುತ್ತಿದ್ದಾನೆ. ತೆಗೆದ ಹಾಗೆ, ಒಂದೊಂದೇ ಹಾಳೆಯನ್ನು ಮೇಜಿನ ಒಂದು ಪಕ್ಕದ ಮೇಲೆ ಇಡುತ್ತಿದ್ದಾನೆ. ಪುನಃ ಪ್ರತಿ ತೆಗೆಯುತ್ತಿದ್ದಾನೆ. ತಮ್ಮು ಕುಳಿತಲ್ಲಿಗೆ ಚಕ್ರಪಾಣಿಯ ದೊಡ್ಡ ಅಂಕೆ, ಅಕ್ಷರಗಳು ಕಾಣು ತ್ತವೆ. ತಮ್ಮು ಮೆಲ್ಲಗೆ ಅದನ್ನು ಓದೋದುತ್ತ ಲೆಕ್ಕಗಳನ್ನು ಮಾಡಲು ಆರಂಭಿಸಿದ. ಒಂದು ಹಾಳೆ ಆಯಿತು, ಮತ್ತೊಂದು ಹಾಳೆ ಅದರ ಮೇಲೆ ಬಿತ್ತು. ಅದನ್ನು ಓದೋದುತ್ತ ತಮ್ಮು ತನ್ನ ಕೆಲಸವನ್ನು ಮುಂದುವರಿ ಸಿದ. ಒಂದು ಲೆಕ್ಕ ಮಾತ್ರ ತಮ್ಮುಗೆ ಚೆನ್ನಾಗಿ ಗೊತ್ತಾಗಲಿಲ್ಲ. ಅದನ್ನು ಹಾಗೆಯೇ ಬಿಟ್ಟು, ಮೂರನೆಯ ಹಾಳೆಯನ್ನು ಓದಿ, ಬರೆದು ಪೂರೈಸಿದ. ಅಷ್ಟರಲ್ಲಿ, 'ತಮ್ಮೂ! ನಿನ್ನ ಕಣ್ಣು ನಿನ್ನ ಪತ್ರದ ಮೇಲೆಯೇ ಇರಲಿ!' ಎಂದು ಪರೀಕ್ಷೆಯ 'ಸುಪರಿಂಟೆಂಡೆಂಟರು' ಹೇಳಿದರು ಬುದ್ಧಿಶಾಲಿಯಾದ ತಮ್ಮು 'ದಡ್ಡ'ನಾದ ಚಕ್ರಪಾಣಿಯ ನಕಲೆತ್ತುವನೆಂದು ಅವರು ನೋಡಿ, ಖಂಡಿತ ಮಾಡಿ ಹಾಗೆ ಎಚ್ಚರಿಸಿದುದಲ್ಲ. ಆ ಸಂಶಯ ಅವರಲ್ಲಿ ಬರಲೇ ಇಲ್ಲ. ಕೇವಲ ಪರೀಕ್ಷೆಯ ನಿಬಂಧನೆಗಳ ಗೌರವಕ್ಕಾಗಿ ಅವರು ತಮ್ಮುವನ್ನು ಎಚ್ಚರಿಸಿದುದು!

ಚಕ್ರಪಾಣಿಗೂ ಈ ಎಚ್ಚರದ ಮಾತಿನಿಂದ ಸ್ವಲ್ಪ ಜಾಗ್ರತೆ ಹುಟ್ಟಿತು. ಅವನು, ಮೆತ್ತಗೆ ಆ ಹಾಳೆಗಳನ್ನು ಅಲ್ಲಿಂದ ತೆಗೆದು ಬೇರೆ ಕಡೆ ಇಟ್ಟ. ತಮ್ಮುವನ್ನು ಓರೆಗಣ್ಣಿನಿಂದ ಒಮ್ಮೆ ನೋಡಿದ. ತಮ್ಮುವಿಗೆ ಎಲ್ಲಿಲ್ಲದ ಸಿಟ್ಟು ಬಂತು. ಅವನು ಹಲ್ಲು ಹಲ್ಲು ಕಡಿದ. ಅವನ ಸಿಟ್ಟಿಗೆ ಎರಡು ಕಾರಣ; ತಾನು ಅವನಿಂದ ನಕಲೆತ್ತಿರಬಹುದೆಂಬ ಸಂಶಯದಿಂದ ಅವನು ತನ್ನನ್ನು ನೋಡಿದನೆಂಬುದೊಂದು; ಮತ್ತೆ ಬರೆದ ಹಾಳೆಗಳನ್ನು ಮೊದಲು ಇಟ್ಟಲ್ಲಿ ಇಡದೆ ಹೋದುದೊಂದು. ಅವನು ಆಗನಿಂದಲೇ ಮನಸ್ಸಿನಲ್ಲಿ ಚಕ್ರಪಾಣಿಯ ಮೇಲೆ ಕತ್ತಿಯನ್ನು ಮಸೆ ಯಲು ಆರಂಭಿಸಿದ. 'ಯಾವುದಕ್ಕೂ ಆರನೆಯ ಫಾರ್ಮಿಗೆ ಕಾಲಿಟ್ಟೆ

ನೆಂದಾಗಲಿ; ಅನಂತರ ಚಕ್ರಪಾಣಿಯನ್ನು ವಿಚಾರಿಸಿಕೊಳ್ಳುವ' ಎಂದು ಪ್ರತಿಜ್ಞೆ ಮಾಡಿದ. ಎಂಥ ಅನ್ಯಾಯ! ನಕಲೆತ್ತಿದ ತನ್ನ ತಪ್ಪನ್ನು ಮರೆತು, ತಪ್ಪಿಲ್ಲದ ಚಕ್ರಪಾಣಿಯನ್ನು ವಿಚಾರಿಸುವುದೇ? ತಮ್ಮುವಿನ ಬುದ್ಧಿ ಹೀಗೇಕಾಯಿತು?

---

## ಹದಿನಾರನೆಯ ಅಧ್ಯಾಯ.

## ಹೆಡ್ಮಾಸ್ಟರರ ಹಿತೋಪದೇಶ.

ಪರೀಕ್ಷೆ ಮುಗಿಯಿತು. ಆದರೆ ತಮ್ಮುವಿಗೆ ಎಲ್ಲ ವಿಷಯಗಳಲ್ಲಿಯೂ 'ಸಾಕಾದಷ್ಟು ಮಾರ್ಕು'ಗಳು ಸಿಕ್ಕಿರಲಿಲ್ಲ. ಅವನ ಸ್ಥಿತಿ ಹೀಗಾದುದನ್ನು ಕಂಡು, ಉಪಾಧ್ಯಾಯರು ಆಶ್ಚರ್ಯಪಟ್ಟರು. ಸೋಮಾರಿತನದಿಂದಲೋ, ತಲೆತಿರುಕತನದಿಂದಲೋ ಹೀಗಾಗಿರಬೇಕೆಂದು ಊಹಿಸಿದರು. ಹೇಗೂ ಅವನಿಗೆ 'ಪ್ರಮೋಷನ್' ಸಿಕ್ಕಲು ಅಡ್ಡಿಯಾಗಲಿಲ್ಲ. ಅವನಿಗೆ ಅದು ಸಿಕ್ಕಿತು.

ತಮ್ಮು ಎರಡನೆಯ ಬಾರಿ ಊರಿಗೆ ಬಂದ. ಅದೇ ರಾಮಯ್ಯನ ಗಾಡಿಯಲ್ಲಿ. ಆದರೆ ಈ ಸಲ ಬಹಳ ಮೆತ್ತಗೆ; ಅವನಲ್ಲಿ ಉತ್ಸಾಹವಿಲ್ಲ; ವಿನೋದವಿಲ್ಲ. ಅವನು ಬಹಳ ಇಳಿದುಹೋಗಿದ್ದ.

ಇದನ್ನು ಕಂಡು ಶಾಸ್ತ್ರಿಗಳು 'ಓದಿ ಓದಿ ನೀನೂ ದಣಿದೆ ದುಡ್ಡು ಕಳುಹಿಸಿ ನಾನೂ ಸೋತೆ; ಒಮ್ಮೆಗೆ ನೀನು ಓದು ಮುಗಿಸಿದರೆ ಸಾಕೆ'ಂದು ಹೇಳಿದರು. ಅವನು 'ಪಾಸೆ'ಂಬುದರಿಂದ ಅವರು ಮತ್ತೇನೂ ಹೇಳಲಿಲ್ಲ.

ಊರಿಗೆ ಬಂದಾಗಿನಿಂದಲೂ ತಮ್ಮು ಹೆಡ್ಮಾಸ್ಟರರ ಕಣ್ಣಿಗೆ ಬೀಳದ ಹಾಗೆ ಜಾಗ್ರತೆಯಿಂದ ಇದ್ದ. ಇದು ಅವರಿಗೂ ತಿಳಿಯಿತು. 'ಹುಡುಗ ಮೊದಲಿನಂತೆ ಇರುವ ಹಾಗೆ ತೋರುವುದಿಲ್ಲ; ಎಲ್ಲಿಯಾದರೂ ಕೆಟ್ಟ ಹುಡುಗರ ಸಹವಾಸಕ್ಕೆ ಬಿದ್ದಿರುವನೋ, ಏನೋ!' ಎಂದು ಅವರು ಊಹಿ

ಸಿದರು. ಮತ್ತೂ ತಮ್ಮು ಕೂಡಲೇ ಬಂದು ಹೋಗಲೆಂದು 'ಜರೂರಾಗಿ' ಹೇಳಿಕಳುಹಿದರು. ತಮ್ಮು ನಿರ್ವಾಹವಿಲ್ಲದೆ ಹೆಡ್ಮಾಸ್ತರರ ಇದಿರಿಗೆ ಬಿದ್ದ. ಅವರು ತಮ್ಮುವನ್ನು ಕಾಲಿಂದ ತಲೆಯ ವರೆಗೂ ಒಮ್ಮೆ ಪರೀಕ್ಷಿಸಿ, 'ಏನು, ತಮ್ಮೂ, 'ಮರ್ಜಿ' ಬದಲಾಯಿಸಿದ ಹಾಗೆ ತೋರುತ್ತದೆ. ಇನ್ನೇನೂ ನನ್ನ ಹಂಗು ನಿನಗಿಲ್ಲ. ಆದುದರಿಂದಲೇ ನೀನು ಊರಿಗೆ ಬಂದು ಇಷ್ಟು ದಿನಗಳಾದರೂ ನನ್ನನ್ನು ಕಾಣಲು ಬರಲಿಲ್ಲವೇನೋ! ಇರಲಿ; ಚಿಂತ್ಯವಿಲ್ಲ. ಈ ಬಾರಿ ನಿನ್ನ ಪರೀಕ್ಷೆಯ ಫಲಿತಾಂಶವೇನು, ಹೇಳು ಕೇಳುವ!' ಎಂದರು.

'ಆರನೆಯ ಫಾರ್ಮಿಗೆ ಹಾಕಿದ್ದಾರೆ' ಎಂದು ಮೆಲ್ಲಗೆ ತಮ್ಮು ಹೇಳಿದ.

**ಹೆ. ಮಾ:**—'ಹಾಕಿದ್ದಾರೆ? ಅದೇನು? ಅವರೇ ಹಾಕಿದರೇ? ನೀನಾಗಿ ಪಾಸಾಗಲಿಲ್ಲವೇ?'

ತಮ್ಮು ಸುಮ್ಮನಿದ್ದ. ಆ ಮೌನದ ಅರ್ಥವನ್ನು ಹೆಡ್ಮಾಸ್ತರರು ಕೂಡಲೇ ತಿಳಿದುಕೊಂಡರು.

**ಹೆ. ಮಾ:**—'ತಮ್ಮೂ! ನನ್ನ ಊಹೆಯು ಈಗ ಸರಿಹೋಯ್ತು. ನೀನು ಕಳೆದ ವರ್ಷ, ಕ್ರಮವಾಗಿ ಓದದೆ, ಅಲಕ್ಷ್ಯಮಾಡಿರಬೇಕು; ಆ ಕಾರಣ ನೀನು 'ಪಾಸ್' ಅಲ್ಲ; ನಿನಗೆ 'ಪ್ರಮೋಷನ್' ಮಾತ್ರ. ನೀನು ಹೀಗಾಗುವೆ ಎಂದು ನಾನೆಂದೂ ತಿಳಿದಿರಲಿಲ್ಲ. ಇನ್ನು ಮುಂದೆಯಾದರೂ ನೀನು ಲಕ್ಷ್ಯಕೊಟ್ಟು ಓದದಿದ್ದರೆ, ನಿನ್ನ ಕುಟುಂಬಕ್ಕೇ ಹಾನಿಯುಂಟಾದೀತೆಂದು ಚೆನ್ನಾಗಿ ತಿಳಿ. ಇಲ್ಲಿ ಚಿಕ್ಕ ಪುಟ್ಟ ಶಾಲೆಗಳಲ್ಲಿ ನಾವು ಉಪಾಧ್ಯಾಯರು ಆಯಾ ವಿದ್ಯಾರ್ಥಿಗಳ ಬುದ್ಧಿಶಕ್ತಿಯ ಪರಿಮಾಣವನ್ನು ತಿಳಿದು, ಅವರಿಂದ ತೆಗೆದುಕೊಳ್ಳಲು ಸಾಧ್ಯವಿರುವ ಎಲ್ಲ ಕೆಲಸವನ್ನೂ ತೆಗೆದುಕೊಳ್ಳುತ್ತೇವೆ. ಆದಷ್ಟು ಹುಡುಗರು ಪಾಸಾಗುವಂತೆಯೂ, ಉಚ್ಚತರಗತಿಯಲ್ಲಿ ಪಾಸಾಗುವಂತೆಯೂ ಪ್ರಯತ್ನಿಸುತ್ತೇವೆ. ಅದು ದೊಡ್ಡ ಪೇಟೆಪಟ್ಟಣ; ಅಲ್ಲದೆ ಹೈಸ್ಕೂಲು. ಅಲ್ಲಿ ವಿದ್ಯಾರ್ಥಿಗಳು ಏನಾದರೂ ಉಪಾಧ್ಯಾಯರಿಗೇನು? ಹತ್ತರೊಡನೆ ಹನ್ನೊಂದು ಎಂಬಂತೆ ಪಾಸಾದಷ್ಟು ಮಂದಿ ಪಾಸಾಗುತ್ತಾರೆ;

ಇಲ್ಲದಿದ್ದವರು ಇಲ್ಲ. ಆ ಕಾರಣ ನಿಮ್ಮ ಒಳ್ಳೆದನ್ನೂ, ಕೆಟ್ಟದನ್ನೂ ನೀವೇ ಚಿಂತಿಸಬೇಕಾಗಿದೆ. ನಿನ್ನ ತಾಯ್ತಂದೆಗಳ ಸುಖ ಕಷ್ಟಗಳ ಅನುಭವವು ಕೊಂಚ ಮಟ್ಟಿಗಾದರೂ ನಿನ್ನ ತಲೆಯೊಳಗೆ ನುಸುಳಿದ್ದರೆ, ನೀನು ಎಷ್ಟು ಮಾತ್ರಕ್ಕೂ 'ಪ್ರಮೋಷನ್' ಪಡೆಯುವ ದುಃಸ್ಥಿತಿಗೆ ಇಳಿಯುತ್ತಿದ್ದಿಲ್ಲ.'

ತಮ್ಮುವಿಗೆ ಗಳಗಳನೆ ಅಳುವ ಹಾಗಾಯಿತು. ಅವನ ಕಣ್ಣುಗಳಲ್ಲಿ ನೀರು ತುಂಬಿತು. 'ಇನ್ನು ಮುಂದೆ, ನಾನು ಕಷ್ಟಪಟ್ಟು ಕಲಿಯುತ್ತೇನೆ. ವ್ಯರ್ಥವಾಗಿ ಕಾಲಹರಣ ಮಾಡುವುದಿಲ್ಲ.' ಎಂದು ಅವನು ಮೆಲ್ಲನೆ ಹೇಳಿದನು.

'ಹಾಗೆ ಬಾ! ಅದೀಗ ಒಳ್ಳೆಯ ಹುಡುಗರ ಲಕ್ಷಣ. ಮುಂದೆ ಯಾದರೂ ಚೆನ್ನಾಗಿ ಓದು; ಆ ಮಾತಿಗೆ ತಪ್ಪಬೇಡ' ಎಂದು ಹೆಡ್ಮಾಸ್ಟರರು ಅವನಿಗೆ ಬುದ್ಧಿ ಹೇಳಿ ಕಳುಹಿಸಿದರು.

---

## ಹದಿನೇಳನೆಯ ಅಧ್ಯಾಯ.

## VI ಫಾರಂ.

ತಮ್ಮು ಆರನೆಯ ಫಾರ್ಮಿಗೆ ಸೇರಿ ಎರಡು ವಾರಗಳು ಕಳೆದಿವೆ. ಅವನು ಹೆಡ್ಮಾಸ್ಟರರ ಸದುಪದೇಶವನ್ನೂ, ಸಂಸಾರದ ದುಃಸ್ಥಿತಿಯನ್ನೂ ಚೆನ್ನಾಗಿ ಮನಸ್ಸಿನಲ್ಲಿ ಇಟ್ಟುಕೊಂಡು, ಕ್ರಮವಾದ ಅಭ್ಯಾಸಕ್ಕೆ ಆರಂಭಿಸಿದ್ದಾನೆ. 'ಕ್ಲಾಸಿನಲ್ಲಿ ದಡ್ಡನೆನಿಸಿಕೊಂಡಿದ್ದ ಆ ಚಕ್ರಪಾಣಿಯು ನಕಲು ತೆಗೆಯುವ ಪ್ರಸಂಗವೂ ನನಗೆ ಬಂತೇ?' ಎಂದು ಅವನು ಒಳಗಿಂದೊಳಗೆ ನಾಚಿಕೊಳ್ಳುತ್ತಿದ್ದಾನೆ. 'ಈ ಬಾರಿ ನಾನು ಅವನನ್ನು ಸೋಲಿಸಲೇ ಬೇಕೆ'ಂದು ಅವನ ಖಂಡಿತವಾದ ಶಪಥ. ಆ ಕಾರಣ ತಮ್ಮು ಈಗ ಹೀಗೆ ಪಟ್ಟುಹಿಡಿದು ಓದುತ್ತಿದ್ದಾನೆ.

ಒಂದು ದಿನ ಸಂಜೆ ತಮ್ಮು ಶಾಲೆಯಿಂದ ಮನೆಗೆ ಬರುವಾಗ್ಗೆ, ಯಾರೋ ಹಿಂದಿನಿಂದ ಬಂದು ಅವನ ಕಣ್ಣು ಮುಚ್ಚಿದರು. ತಮ್ಮು

ಯಾರೆಂದು ನಾಲ್ಕಾರು ಬಾರಿ ಕೇಳಿದನು. ಉತ್ತರವಿಲ್ಲ. ಕೊನೆಗೆ ತಮ್ಮು ಕಣ್ಣುಮುಚ್ಚಿದ ಕೈಗಳನ್ನು ಹಿಡಿದುಕೊಂಡು—'ರಾಮುಸ್ವಾಮಿ!' ಎಂದನು.

ರಾಮುಸ್ವಾಮಿ ಕೈಬಿಟ್ಟು ನಕ್ಕನು.

**ತಮ್ಮು:**—'ಯಾವಾಗ ಬಂದೆ? ಇಷ್ಟು ಸಾವಕಾಶವೇನು?'

**ರಾಮುಸ್ವಾಮಿ:**—'ಇದೇ ಈಗ ಬಂದೆ. ಮೈ ಚೆನ್ನಾಗಿರಲಿಲ್ಲ. ಪಾಠಗಳು ಬಹಳ ಮುಂದರಿಸಿವೆಯೇ?'

**ತ:**—'ಇಲ್ಲ; ಎಲ್ಲಿಯೋ ಅಲ್ಪಸ್ವಲ್ಪ'

**ರಾ:**—'ಈ ವರ್ಷ ನಾವು ಒಂದು 'ಕನ್ನಡ ಸಭೆ'ಯನ್ನು ಆರಂಭಿಸಬೇಕು. 'ಇಂಗ್ಲಿಷ್ ಡಿಬೇಟಿಂಗ್ ಸೊಸೈಟಿ' ಮಾತ್ರ ಬೇಕು; ಇದೇಕೆ ಬೇಡ? ನಮ್ಮ ಪಂಡಿತರು ಈ ಕುರಿತು ನಮಗೆ ಎಷ್ಟೋ ಬಾರಿ ಹೇಳಿದ್ದಾರೆ. ಈಗಿನ ಪದ್ಧತಿಯು ಮೇರೆಗೆ ವಾರಕ್ಕೊಮ್ಮೆ 'ಡಿಬೇಟಿಂಗ್ ಸೊಸೈಟಿಯು ಮೀಟಿಂಗ್'' ಆಗುತ್ತದೆ. ತಿಂಗಳಿಗೆ ಒಮ್ಮೆ ಕನ್ನಡ ಸಭೆಯೂ ಆಗುವಂತೆ ಏರ್ಪಡಿಸಿದರೇನು ಕೇಡು?'

**ತ:**—'ಅಗತ್ಯವಾಗಿ; ನನಗೆ ಸಂತೋಷವೇ. ಕನ್ನಡ ಸಭೆ ಬರುವ ವಾರದಿಂದಲೇ ಆರಂಭವಾಗುವಂತೆ ಏರ್ಪಡಿಸುವ. ನಮ್ಮ ಪಂಡಿತರನ್ನು ಅಂದಿನ ಅಧ್ಯಕ್ಷರಾಗುವಂತೆ ಅರಿಕೆಮಾಡಿಕೊಳ್ಳುವ.'

**ರಾ:**—'ಹಾಗೆಯೇ ಮಾಡುವ. ಯಾವುದಕ್ಕೂ ನಾವು ಸಂಘದ ಕಾರ್ಯದರ್ಶಿಯನ್ನು ಮಾತಾಡಿಸಿ ನೋಡಬೇಕು. ಅವನೂ ಅಲ್ಲವೆನ್ನಲಿಕ್ಕಿಲ್ಲ.'

ಮರುದಿನ ತಮ್ಮು, ರಾಮುಸ್ವಾಮಿ ಇಬ್ಬರೂ 'ಕಾರ್ಯದರ್ಶಿ'ಯನ್ನು ಕಂಡು ಮಾತಾಡಿದರು. ಅವನೂ ಒಪ್ಪಿದನು. ತಿಂಗಳಿಗೊಮ್ಮೆ ಕನ್ನಡ ಸಭೆ ಸೇರಬೇಕೆಂದೂ, ಮುಂದಿನ ವಾರದಿಂದ ಅದು ಆರಂಭಿಸಬೇಕೆಂದೂ, ಪಂಡಿತರು ಪ್ರಥಮ ಸಭೆಯು ಅಧ್ಯಕ್ಷರಾಗಬೇಕೆಂದೂ ಪ್ರಸ್ತಾವವಾಯಿತು.

ಆದರೆ 'ಕನ್ನಡಕ್ಕೂ ಒಂದು ಸಭೆ ಏಕೆ?' ಎಂದು ಕೆಲವರ ಪಕ್ಷ. 'ಕನ್ನಡದಲ್ಲಿ ಏನಿದೆ?' ಎಂದು ಅವರಿಗೆ ದೊಡ್ಡ ನಗೆ. ಅದನ್ನು ಕೇಳಿ ಪಂಡಿತರಿಗೂ ಕೊಂಚ ರೇಗಿತು. ಅವರೂ ನಾಲ್ಕು ಮಾತಾಡಿದರು. 'ಕನ್ನಡದಲ್ಲಿ ಏನಿದೆಯೋ, ಏನಿಲ್ಲವೋ ನೀವೇನು ಬಲ್ಲಿರಿ? ಕಷ್ಟಪಟ್ಟವರಿಗೆ ಅಲ್ಲವೇ ಗೊತ್ತು? ವೃಥಾ ಕನ್ನಡವನ್ನು ಏಕೆ ದೂರುತ್ತೀರಿ? ಕನ್ನಡದ ಈಗಿನ ಅವಸ್ಥೆಗೆ ನಿಮ್ಮಂಥ 'ಇಂಗ್ಲಿಷ್' ತಲೆಗೇರಿದ ವಿದ್ಯಾವಂತರೇ ಕಾರಣ'ರೆಂದು ಅವರು ಪ್ರತಿಭಟಿಸಿದರು. ಈ ವಾಗ್ವಾದದ ವಿವರವು, ಹೆಡ್ಮಾಸ್ಟರರ ವರೆಗೂ ಹೋಗಿ ಅಲ್ಲಿ 'ಕನ್ನಡ ಸಭೆಯಾಗಲೆ'ಂದು ಸಮ್ಮತಿಯು ದೊರಕಿತು. ಅಲ್ಲಿಗೆ ವಾಗ್ವಾದವು ನಿಂತಿತು. ಅದರಂತೆ ಪ್ರಥಮ ಸಭೆಯೂ ಸಂಭ್ರಮದಿಂದ ಜರುಗಿತು. ಅಧ್ಯಕ್ಷರು ಪಂಡಿತರೇ.

ಅಧ್ಯಕ್ಷರು ಅಂದಿನ ತಮ್ಮ ಭಾಷಣದಲ್ಲಿ ಕನ್ನಡ ದೇಶ ಮತ್ತೂ ಕನ್ನಡ ಭಾಷೆಗಳ ಕುರಿತು ಸಂಕ್ಷೇಪವಾಗಿ ಪ್ರಸ್ತಾವಿಸಿದರು. ಕನ್ನಡ ದೇಶದ ಪೂರ್ವದ ಮಹತ್ವದ ಸ್ಥಿತಿಯನ್ನು ಸ್ವಲ್ಪ ಮಟ್ಟಿಗೆ ಹೇಳಿದರು. ಹಿಂದೆ ಆಗಿ ಹೋದ ಕರ್ನಾಟಕ ಸೀಮೆಯ ದೊರೆಗಳ, ಅವರ ಆಳಿಕೆಯ ಸೂಕ್ಷ್ಮಪರಿಚಯುವನ್ನು ಮಾಡಿಕೊಟ್ಟರು. ಕರ್ನಾಟಕ ದೇಶದ ಮಹಾಕವಿಗಳ, ಅವರ ಕಾವ್ಯಗಳ ಪ್ರಾಶಸ್ತ್ಯವನ್ನು ಸ್ವಲ್ಪ ಮಾತಿನಲ್ಲಿ ನೆರೆದಿದ್ದವರಿಗೆ ತಿಳಿಯಪಡಿಸಿದರು. ಈಗ ಹಂಚಿ ಹೋಗಿರುವ ಧಾರವಾಡ, ಮಂಗಳೂರು, ಮೈಸೂರು ಸೀಮೆಗಳ ಭಿನ್ನತೆಯಿಂದ ಭಾಷೆಯ ಉನ್ನತಿಗೆ ಎಷ್ಟು ತೊಂದರೆ ಎಂಬುದನ್ನು ವಿವರಿಸಿದರು. ಮೂರು ಪ್ರಾಂತಗಳಲ್ಲಿರುವ ಭಾಷೆಯ ಭೇದವು ಆ ಉನ್ನತಿಗೆ ಕೊಂಚ ತೊಡಕೆಂದರು. ಜನರಿಗೆ ಕನ್ನಡದಲ್ಲಿ ಆದರವು ಸಾಲದೆಂದೂ, ವಿದ್ಯಾರ್ಥಿಗಳಾದರೂ ಕನ್ನಡದ ಮೇಲೆ ಮಮತೆಯನ್ನು ಇಟ್ಟು, ಅದರ ಉನ್ನತಿಗಾಗಿ ಕೆಲಸ ಮಾಡಬೇಕೆಂದೂ ಪ್ರಾರ್ಥಿಸಿದರು. ದಕ್ಷಿಣ ಕನ್ನಡದಲ್ಲಿರುವ ಮೂಡಬಿದರೆಯ ಪುರಾತನ ಹಸ್ತಪ್ರತಿಗಳ ಭಂಡಾರದ ಕುರಿತು ನಾಲ್ಕು ಮಾತುಗಳನ್ನು ಹೇಳಿ, ಕರ್ನಾಟಕ ಸಾಹಿತ್ಯಕ್ಕೆ ಜೈನ ಮತ್ತೂ ಶೈವ ಕವಿಗಳಿಂದಾದ

ಉಪಕಾರವನ್ನು ನೆನಪಿಗೆ ತಂದುಕೊಟ್ಟರು. ಹೊಸಗನ್ನಡವು ಬಂದ ಮಾತ್ರಕ್ಕೆ ಹಳೆಗನ್ನಡವನ್ನು ಮರೆಯುವದಲ್ಲೆಂದೂ; 'ಇಂಗ್ಲಿಷ್' ಕಲಿತ ಮಾತ್ರಕ್ಕೆ ಕನ್ನಡವನ್ನು ಮರೆಯಬಾರದೆಂದೂ ಉಪದೇಶಿಸಿದರು. ಈಗ ಆರಂಭವಾದ ಈ ತರುಣ ಕನ್ನಡ ಮಂಡಲಿಯನ್ನು ದೇವರು ಆಶೀರ್ವದಿಸ ಲೆಂದೂ, ಇದರಿಂದಲೂ ಉಚ್ಚಧ್ಯೇಯಗಳುಳ್ಳ ಸಾರ್ವಜನಿಕಸಭೆಗಳನ್ನು ಕರ್ಣಾಟಕದಲ್ಲಿ ಎಲ್ಲೆಲ್ಲಿಯೂ ನೋಡುವಂತಾಗಲೆಂದೂ ಭಾಷಣವನ್ನು ಮುಗಿಸಿದರು.

---

## ಹದಿನೆಂಟನೆಯ ಅಧ್ಯಾಯ.

## ರಾಮರಾಯನ ಭೇಟಿ.

ಒಂದು ಆದಿತ್ಯವಾರ. ಶ್ಯಾಮಭಟ್ಟರ ಹೊಟೆಲಿನಲ್ಲಿ ಇಬ್ಬರು ಗೆಳೆಯರೂ ಸೇರಿದ್ದಾರೆ;—ತಮ್ಮು, ರಾಮಸ್ವಾಮಿ. ಮಾತಾಡುತ್ತಾ ಇದ್ದಾರೆ. ತಮ್ಮು ಆ ದಿನ ಸಾಲಕೊಟ್ಟ ದುಡ್ಡು ಬರಲಿಲ್ಲ ಎಂತ ಪೇಚಾಡುತ್ತಾ ಇದ್ದಾನೆ' 'ನಾನು ಹೊಟೆಲಿಗೆ ಕೊಡಬೇಕು; ದರ್ಜಿಗೆ ಕೊಡಬೇಕು; ಮನೆಯಿಂದ ಈ ತಿಂಗಳಲ್ಲಿ ಹಣ ಬರುವ ಹಾಗಿಲ್ಲ. ಎಲ್ಲಿಂದ ಕೊಡಲಿ?' ಎಂತ ಗೋಳಾಡುತ್ತಾ ಇದ್ದಾನೆ. ಆ ದಿನ ದುರ್ಗಕ್ಕೆ ಹೋಗುವಾಗ, ಆಟದಲ್ಲಿ ಬಂದಿದ್ದ ೨೨ ರೂಪಾಯಿ ಕೈಗಡ ಕೊಟ್ಟಿದ್ದನಲ್ಲ! ಅದರಲ್ಲಿ ಒಂದು ಕಾಸೂ ಅವನ ಕೈ ಹತ್ತಿರಲಿಲ್ಲ. ರಾಮಸ್ವಾಮಿ ಅಂದು ಬಾಯಿ ಪಟಾಕಿ ಹಾರಿಸಿದ್ದೇ ಸರಿ,—'ಕೊಡಿಸುತ್ತೇನೆ' ಎಂದು. ಆದರೆ ಕೊಟ್ಟವರೂ ಇಲ್ಲ; ಕೊಡಿಸಿದವರೂ ಇಲ್ಲ; ತೆಗೆದುಕೊಂಡವರೂ ಇಲ್ಲ. ತಮ್ಮು ಆ ದುಡ್ಡು ನಂಬಿ 'ಈ ತಿಂಗಳಲ್ಲಿ ಹಣ ಬೇಡ' ಎಂತ ಶಾಸ್ತ್ರಿಗಳಿಗೆ ಹೇಳಿದ್ದ. ರಾಮಸ್ವಾಮಿಗೋ? ಇದೆಲ್ಲಾ ಒಂದು ವಿನೋದ. 'ನಿನ್ನನ್ನು ದುರ್ಗಕ್ಕೆ ಕರೆದುಕೊಂಡು ಹೋದುದಕ್ಕೆರಡು; ಹಿಂದಿರುಗಿ ಕರೆದುಕೊಂಡು ಬಂದುದಕ್ಕೆರಡು. ನಿನ್ನ ವಂತಿಗೆಯಾಗಿ ಎರಡು; ನನ್ನ ವಂತಿಗೆಗಾಗಿ ಎರಡು—

ಹೀಗೆ ಎರಡೆರಡೇ ರೂಪಾಯಿಗಳನ್ನು ಕಳೆಯುತ್ತ ಬಾ. ಆಗ ನಿನ್ನ ಸಾಲ ವೆಲ್ಲ ಬಂದ ಹಾಗಾಯ್ತು' ಎಂದು ಅವನು ಹಾಸ್ಯಮಾಡುತ್ತಾ ಇವನನ್ನು ಗೋಳುಹೊಯ್ಯುತ್ತಾ ಇದ್ದ. ಅಷ್ಟರಲ್ಲಿ ಪಕ್ಕನೇ ರಾಮುರಾಯ ಬಂದೇ ಬಂದ. ಅಪರೂಪದ ಆಸಾಮಿ.

ರಾಮುಸ್ವಾಮಿಗೆ ರಾಮುರಾಯನ ಪರಿಚಯವಿತ್ತು. ತಮ್ಮುವಿಗೂ ಅವನ ಗುರುತು ಸಿಕ್ಕಿತು. 'ಬಾ! ಕೂತುಕೋ!' ಎಂದು ರಾಮುಸ್ವಾಮಿ ರಾಮುರಾಯನಿಗೆ ಹೇಳಿದ. ರಾಮುರಾಯನು ಬಂದು ಕುಳಿತ.

ಕಳೆದ ಒಂದೂವರೆ ವರ್ಷದಿಂದ ರಾಮುರಾಯನ ವರ್ತಮಾನವಿರ ಲಿಲ್ಲ. ಅವನು ಶಿವರಾಜಪುರದಲ್ಲಿ ಇರಲಿಲ್ಲ. ಇದೇ ಈಗ ಅವನು ಊರಿಂದ ಬಂದ; ಊಟಕ್ಕೆಂದು ಹೋಟಲ್ ಹೊಕ್ಕವನು ಹಾಗೇ ಇವರನ್ನು ಕಂಡ.

**ರಾಮುಸ್ವಾಮಿ:**—'ಏನಯ್ಯಾ! ಭೂಪ! ಇಷ್ಟು ದಿನಗಳಿಂದ ನಿನ್ನ ಸುಳಿವೇ ಇಲ್ಲ ಇಲ್ಲಿ. ಎಲ್ಲಿದ್ದೆ? ಏನುಮಾಡುತ್ತಿದ್ದೆ?'

**ರಾಮುರಾಯ:**—'ಎಲ್ಲೆಲ್ಲೋ ಇದ್ದೆ. ಏನೇನೋ ಮಾಡುತ್ತಿದ್ದೆ. ನೋಡದ ಊರುಗಳನ್ನೆಲ್ಲಾ ನೋಡಿದೆ. ಪಡದ ಸುಖವನ್ನೆಲ್ಲಾ ಪಡೆದೆ.'

**ರಾಮುಸ್ವಾಮಿ:**—'ಹಾಗೆಂದರೆ? ಯಾವ ಊರು ನೋಡಿದೆ? ಏನು ಸುಖ ಪಟ್ಟೆ? ಹೇಳಬಾರದೇ?'

**ರಾಮುರಾಯ:**—'ಬೆಂಗಳೂರು ತಿರುಗಿದೆ; ಮೈಸೂರು ನೋಡಿದೆ; ಶ್ರೀರಂಗಪಟ್ಟಣ ಕಂಡೆ.'

**ರಾಮುಸ್ವಾಮಿ:**—'ಏಕೆ ಹೋದೆ ಅಲ್ಲಿಗೆಲ್ಲ? ಇಲ್ಲೋದುವುದು ಬಿಟ್ಟು?'

**ರಾಮುರಾಯ:**—'ನಮ್ಮ ಭಾವನಿಗೆ ಅಕಸ್ಮಾತ್ತಾಗಿ ಹುಚ್ಚು ಹಿಡಿ ಯಿತು. ಅವರನ್ನು ಕರೆದುಕೊಂಡು ಊರೂರು ಅಂಡಲೆಯಬೇಕಾಯಿತು. ಅಲೆದೆ. ಔಷಧಿಗಾಗಿ! ನಮ್ಮಪ್ಪ ಇದಕ್ಕೆಲ್ಲ ಬರುವವರಲ್ಲ. ಅವರು

'ಬೇಂಕರರು.' ಅವರ 'ಬೇಂಕ್' ಆಯಿತು; ಅವರ ದುಡ್ಡಾಯಿತು; ಅವರಾಯಿತು. ಅವರಿಗೆ ನಮ್ಮ ಭಾವ ಹೋದರೂ ಸರಿಯೇ. ಅಕ್ಕ ಹೋದರೂ ಸರಿಯೇ. ಹಾಗಾಗಿ ವರ್ಷೂವರೆಯಿಂದ ಸುತ್ತುವುದೇ ನನಗೆ ಕೆಲಸ.'

**ರಾಮಸ್ವಾಮಿ:**—'ಪುಣ್ಯವಂತ. ಆ ನೆವದಿಂದಲಾದರೂ ನೀನು ಕರ್ಣಾಟಕದ ಪ್ರಸಿದ್ಧವಾದ ಪಟ್ಟಣಗಳನ್ನು ಕಣ್ಣು ತುಂಬ ನೋಡಿ ಬಂದೆ. ಬೆಂಗಳೂರೇನೋ ಬಹಳ ದೊಡ್ಡದಂತಲ್ಲ?'

**ರಾಮರಾಯ:**—'ಸಂದೇಹವೇನು? ದೊಡ್ಡ ಪಟ್ಟಣ. ನೋಡಲಿಕ್ಕೆ ಎರಡು ಕಣ್ಣು ಸಾಲದು. ಆ ಬೀದಿಗಳೇನು, ಆ ಅಂಗಡಿಗಳೇನು, ಆ ಕಟ್ಟಡಗಳೇನು, ಆ ಮಾರ್ಕೆಟುಗಳೇನು, ಆ ಹೂದೋಟಗಳೇನು? ಆ ವಿದ್ಯುಚ್ಛಕ್ತಿಯ ದೀಪಮಾಲೆಗಳೇನು?—ಆ ವೈಭವ, ಅಂದಚೆಂದಗಳನ್ನು ಹೇಳಿ ತೀರದು. ಮೈಸೂರೂ ಹಾಗೆಯೇ. ಬೆಂಗಳೂರಷ್ಟು ದೊಡ್ಡದಲ್ಲದಿದ್ದರೂ ಲಾವಣ್ಯಶೃಂಗಾರದಲ್ಲಿ ಅದು ಬೆಂಗಳೂರನ್ನೂ ಮೀರಿಸುವ ಹಾಗಿದೆ. ಅಲ್ಲಿನ ಅರಮನೆಯನ್ನು ನೀನು ನೋಡಬೇಕು. ಎಷ್ಟೆತ್ತರ! ಅವರ ಕಲಶಗಳು,—ಎಲ್ಲಿಂದೆಲ್ಲಿಗೆ ತೋರುತ್ತದೆ? ವಿದ್ಯುಚ್ಛಕ್ತಿಯ ದೀಪಗಳನ್ನು ಹಚ್ಚಿ ಬೆಳಗುವಾಗ ಅದು ಹೇಗೆ ಝಗಝಗಿಸುತ್ತದೆ! ಸಮೀಪದಲ್ಲಿರುವ ಚಾಮುಂಡಿಯ ಬೆಟ್ಟವಾದರೂ ನೋಟಕ್ಕೆ ಬಹು ರಮ್ಯವಾಗಿದೆ.'

**ರಾಮಸ್ವಾಮಿ:**—'ಶ್ರೀರಂಗಪಟ್ಟಣವೋ?'

**ರಾಮರಾಯ:**—'ಅದೀಗ ಹಾಳು ಸುರಿಯುತ್ತಾ ಇದೆ. ಆದರೂ ಇತಿಹಾಸದಲ್ಲಿ ಪ್ರಸಿದ್ಧವಾದ ಸ್ಥಳವದು. ಅಲ್ಲಿ ಟೀಪು ಸುಲ್ತಾನನ ಅರಮನೆಯುಂಟು. ಅವನ ಮತ್ತು ಹೈದರನ ಗೋರಿಗಳುಂಟು. ಇನ್ನೂ ನೋಡಬೇಕಾದುದೆಷ್ಟೋ ಅಲ್ಲಿ ಉಂಟು.'

**ರಾಮಸ್ವಾಮಿ:**—'ಅದಿರಲಿ; ಅಲ್ಲಿ, ಬೆಂಗಳೂರು, ಮೈಸೂರಲ್ಲಿ ಕಾಫಿ ಹೊಟಲುಗಳು ಹೇಗೆ? ಇಲ್ಲಿನ ಹಾಗೆಯೇ?'

ರಾಮರಾಯು:—'ಛೀ! ಇವೆಲ್ಲಿ? ಅವೆಲ್ಲಿ? ಆಕಾಶ ಪಾತಾಳ. ಹಗಲು ರಾತ್ರಿ. ಅವೆಲ್ಲ ಬಹು ಸೊಗಸಾಗಿವೆ. ಆ ಕಾಫಿ ಏನು? ಆ ತಿಂಡಿ ಏನು? ತುಪ್ಪದ್ದು ಅಂದರೆ ತುಪ್ಪದ್ದೇ. ಎಣ್ಣೇದು ಅಂದರೆ ಎಣ್ಣೆಯದೇ. ಆದರೆ ಒಂದು ಸಲ ಹೋಟಲಿಗೆ ಹೊಕ್ಕ ಅಂದರೆ ಎಂಟಾಣೆಗೋ ರೂಪಾಯಿಗೋ ಕ್ಷೌರ. ತಿನ್ನುವಾಗ ಗೊತ್ತಾಗುವುದಿಲ್ಲ; ತಿಂದು ತೇಗಿ, ಜೇಬಿಗೆ ಕೈಹಾಕುವಾಗ 'ಹೋಟಲ್ ರುಚಿ' ಗೊತ್ತಾಗುತ್ತದೆ.'

ತಮ್ಮುವಿಗೆ ಇದೊಂದೂ ಬೇಕಾಗಿರಲಿಲ್ಲ. ಅವನಿಗೆ ಬೇಕಾದುದು ದುಡ್ಡು; 'ಆ ದುಡ್ಡಿಗೇನು ಮಾಡಲಿ?' ಎಂದು ಕಣ್ಣು ಕಣ್ಣು ಬಿಡುತ್ತಾ ಇದ್ದ. ತಮ್ಮು ಹೀಗೆ ದೆವ್ವ ಬಡಿದ ಹಾಗೆ ಕುಳ್ಳಿರುವುದನ್ನು ರಾಮರಾಯು ಕಂಡು 'ಏನಯ್ಯಾ! ಗೆಳೆಯಾ! ನನ್ನ ಮೇಲಿನ ಅವತ್ತಿನ ಕೋಪ ಇನ್ನೂ ಆರಿಲ್ಲವೇ? ಬಿಟ್ಟುಬಿಡು ಅದನ್ನು! ನಾನು ತಿರುಗಿ ಅದೇ 'ಮೆಟ್ರಿಕ್' ಕ್ಲಾಸಿನಲ್ಲಿ ಕೂತುಕೊಳ್ಳಲು ಈಗ ಬಂದಿದ್ದೇನೆ. ಪ್ಯಾಸಾಗುವ ಯೋಚನೆ ಈ ಜನ್ಮದಲ್ಲಿ ನನಗೆ ಯಾವಾಗಲೂ ಹತ್ತಿಲ್ಲ. ಈಗಲೂ ಇಲ್ಲ ನಮ್ಮೂರು ಕೆಟ್ಟ ಹಳ್ಳಿಕೊಂಪೆ. ಹೊತ್ತು ಹೋಗುವುದಿಲ್ಲ. ಅದಕ್ಕಾಗಿ ನಿಮ್ಮಂಥಾ ಸ್ನೇಹಿತರೊಡನೆ ಒಂದು ವರ್ಷವಾದರೂ ಸಂತೋಷದಿಂದಿರುವ ಎಂದು ಪುನಃ ಬಂದೆ. ಏನೆನ್ನುವೆ?' ಎಂದ.

ರಾಮಸ್ವಾಮಿ:—'ಅವನಿಗೆ ಸ್ವಲ್ಪ ದುಡ್ಡಿನ ಯೋಚನೆ. ಅದೇ ಮೌನ! ಎಲಾ! ಟೋಪಿ! ಹೆದರಬೇಡವೋ! ನಿನಗೆ ಬೇಕಾದ ದುಡ್ಡು ನಾನು ಕೊಡುತ್ತೇನೆ. ಇದೋ! ಇಲ್ಲಿದೆ. ತೆಗೆದುಕೊ. 20 ರೂಪಾಯ. ಹಿಂದಕ್ಕೆ ಕೊಟ್ಟರೆ ಕೊಡು. ಬಿಟ್ಟರೆ ಬಿಡು. 'ದುಡ್ಡಿಲ್ಲ' ಎಂದು ಇನ್ನಾದರೂ ಬಡಕೊಂಡು ಸಾಯಬೇಡ. ಸ್ವಲ್ಪ ಗೆಲುವಾಗಿರು!'

ಅಂದಿನ ಆದಿತ್ಯವಾರ ಹಾಗೆ ಚಕ್ಕಂದದಲ್ಲಿ ಹೋಯಿತು. ತಮ್ಮುವಿಗೆ ಇತ್ತ ರಾಮಸ್ವಾಮಿಯ ದುಡ್ಡೂ ಸಿಕ್ಕಿತು. ಅತ್ತ ರಾಮರಾಯನ ಸ್ನೇಹವೂ ಸಿಕ್ಕಿತು. ಸಾಲವೂ ಸ್ವಲ್ಪ ಕಡಿಮೆಯಾಯಿತು. ಉತ್ಸಾಹವೂ ಹೆಚ್ಚಿತು. ಸೋಮವಾರದಿಂದ ರಾಮರಾಯನ ಪ್ರವೇಶವಾಯಿತು— ಕ್ಲಾಸಿನೊಳಗೆ.

ಪ್ರವೇಶವಾದ ನಿಮಿಷದಿಂದ ಮೂವರೂ ಒಂದು ಬೆಂಚಿನಲ್ಲಿ ಒಟ್ಟಿಗೆ. ತಮ್ಮು ನಡುವೆ; ರಾಮಸ್ವಾಮಿ—ರಾಮರಾಯ ಅವನ ಎಡಬಲಗಳಲ್ಲಿ. ಮೊದಲು ತಮ್ಮುವಿಗೆ ರಾಹು ಒಬ್ಬನೇ ಇದ್ದ;—ರಾಮಸ್ವಾಮಿ. ಈಗ ಕೇತುವೂ ಒಬ್ಬ ಹತ್ತಿರ ಸೇರಿದ-ರಾಮರಾಯ. ಇಬ್ಬರೂ ಅವನನ್ನು ಬಲ ವಾಗಿ ಹಿಡಿದುಕೊಂಡರು. ಅವನನ್ನು ಹಾಳು ಮಾಡಲಿಕ್ಕೆ; ಅವನ ಭವಿಷ್ಯ ವನ್ನು ಕೆಡಿಸಲಿಕ್ಕೆ! ಇನ್ನು ಅವನ ಕಥೆಯನ್ನು ಹೇಳಲೇನು? ಕೇಳ ಲೇನು?

ರಾಮರಾಯ ಮಹಾ ಕುಸುಬ್ರಸ್ಟಿಯವನು. ಕಂಡುದಕ್ಕೊಂದು ಕೊಂಕು ಉಂಟು ಅವನ ಹತ್ತಿರ. ಆ ಕಾರಣ ತಮ್ಮುವಿನಲ್ಲಿ ಇನ್ನೂ ಉಳಿದಿದ್ದ ಆ 'ಹಳ್ಳೀಕ್ರಮ'ಗಳನ್ನು ಸ್ವಲ್ಪವೂ ಅವನು ಮೆಚ್ಚಲಿಲ್ಲ. ಅವನ ಹಾಸನದ ಟೋಪಿ, ಜೋಲು ಅಂಗಿ, ಮೊಳಕಾಲು ವರೆಗಿನ ಧೋತರದ ಅಂಚಿನ ಪಂಚೆ, ವಿಭೂತಿ—ಅಕ್ಷತೆ, ಇದೊಂದೂ ಅವನಿಗೆ ಸರಿಬೀಳುತ್ತಿರಲಿಲ್ಲ. ಅವನ 'ಜುಟ್ಟು' ಇವನಿಗೆ ತೀರ ಅಸಹ್ಯವೆನಿಸಿತ್ತು. ಇವನಿಗೆ 'ಕಾಫಿ'ಯ ಅಭ್ಯಾಸವಾಗಲೀ, 'ಸಿಗರೆಟ್'ನ ಆಭ್ಯಾಸವಾಗಲೀ 'ಸ್ಟಾಂಡಾರ್ಡಿಗೆ' ಸಾಕಷ್ಟು ಇಲ್ಲವೆಂದು ಅವನಿಗೆ ಬಹಳ ಆಶ್ಚರ್ಯ. ಇವನಿಗೆ 'ಸ್ವಂತ ಕ್ಷೌರವು' ಗೊತ್ತಿಲ್ಲವೆಂಬುದು ರಾಮರಾಯನಿಗೊಂದು ಪರಿಹಾಸ್ಯಕ್ಕ ಕಾರಣ. ಸ್ನಾನ, ಸಂಧ್ಯಾವಂದನೆ ಮೊದಲಾದುವು ವಿದ್ಯಾರ್ಥಿಗಳ ಪಾಲಿಗೆ ಬಂದುವಲ್ಲವೆಂದೂ, ಪುರೋಹಿತರದೆಂದೂ ಪದೇ ಪದೇ ಅವನು ಹೇಳುತ್ತಿದ್ದನು. ಮಾತ್ರವಲ್ಲ; ಇವೆಲ್ಲ ವಿಷಯಗಳ ಕುರಿತು, ತಮ್ಮುವಿಗೆ, ರಾಮಸ್ವಾಮಿಯ ಇದಿರಲ್ಲಿ, ಎಷ್ಟೊ ಒಗೆಯಾಗಿ ಉಪದೇಶ ವನ್ನೂ ಕೊಡುತ್ತಿದ್ದನು. ಆದರೆ ತಮ್ಮು ಹೇಳಿದುದಕ್ಕೆಲ್ಲ ತಲೆಯಲ್ಲಾಡಿಸು ತ್ತಿದ್ದ. ಕೇಳಿಯೂ ಕಿವಿಗೆ ಬೀಳದ ಹಾಗೆ ಮಾಡುತ್ತಿದ್ದ.

---

## ಹತ್ತೊಂಭತ್ತನೆಯ ಅಧ್ಯಾಯ.

### ನಾಟಕ.

ಈ ವರ್ಷ ಹ್ಯಾಸ್ಕೂಲಿಗೆ ಒಬ್ಬ ಹೊಸ ಉಪಾಧ್ಯಾಯರ ನೇಮಕ ವಾಗಿದೆ. ಅವರು 'ಫೂಟ್ ಬಾಲ್' ಆಟದಲ್ಲಿ ಒಳ್ಳೇ ಸಮರ್ಥರು. ಅವರ ಸೂಚನೆಯಂತೆ, 'ಫೂಟ್ ಬಾಲಿನ' ಒಂದು ಸಂಸ್ಥೆಯು ಈ ಶಾಲೆಯಲ್ಲಿ ಆರಂಭವಾಗಿದೆ. ಸಂಸ್ಥೆಯು ಮೆಂಬರುಗಳಾಗಿ ತಮ್ಮು, ರಾಮರಾಯ, ರಾಮಸ್ವಾಮಿ ಮೊದಲಾದ ಹದಿನೈದು ಮಂದಿ ಸೇರಿಕೊಂಡಿದ್ದಾರೆ. ತಮ್ಮುನಿಗೆ 'ಫೂಟ್ ಬಾಲ್' ಆಟವೇನೂ ಹೊಸದಲ್ಲ. ಅವನು ಶ್ರೀರಾಮಪುರದ ಶಾಲೆಯಲ್ಲಿ 'ಫೂಟ್ ಬಾಲ್' ಸಂಸ್ಥೆಯ ಮುಖಂಡನಾಗಿದ್ದನು. ಈಗ ಇಲ್ಲಿಯೂ ಅಂಥದೇ ಒಂದು ಸಂಸ್ಥೆಯು ಆರಂಭವಾದುದು ಅವನಿಗೆ ಬಹಳ ಸಂತೋಷವಾಗಿತ್ತು. ಹೊಸ ಉಪಾಧ್ಯಾಯರು ಈ ವರ್ಷ ನಡೆಯುವ 'ಫೂಟ್ ಬಾಲ್ ಟೂರ್ನಮೆಂಟಿ'ಗೆ ಈ ಶಾಲೆಯಿಂದಲೂ ಒಂದು ಮೇಳವನ್ನು ಕಳುಹಿಸಬೇಕೆಂದು ನಿಶ್ಚೈಸಿದ್ದರು. ಅದಕ್ಕಾಗಿ ಪ್ರತಿದಿನವೂ ಸಂಜೆ, ಈ ಸಂಘದ ಮೆಂಬರರನ್ನು ತರಬೇತು ಮಾಡುತ್ತಿದ್ದರು.

ತಮ್ಮು, ರಾಮರಾಯ ಮತ್ತೂ ರಾಮಸ್ವಾಮಿ ಇವರು ಹಗಲಿಡೀ ಒಟ್ಟಾಗಿರುವುದಕ್ಕೆ ಈ 'ಫೂಟ್ ಬಾಲ್' ಸಂಸ್ಥೆಯೂ ಒಂದು ಕಾರಣವಾಯಿತು. ದಿನೇದಿನೇ ಅವರವರೊಳಗಿನ ಸ್ನೇಹವೂ, ಸಲಿಗೆಯೂ ಬೆಳೆಯಲು ಇದೂ ಒಂದು ಪ್ರಬಲವಾದ ಸಾಧನವಾಯಿತು. ಇವರ ಈಗಿನ ಸ್ನೇಹವೆಂದರೆ—ದೋಸೆ, ಬೆಣ್ಣೆ, ಚಟ್ಣಿಗಳಿಗಿದ್ದ ಹಾಗೆ. ತಾನು ನಕಲೆತ್ತಿದಾಗ ಚಕ್ರಪಾಣಿ ತನ್ನನ್ನು ಓರೆನೋಟದಿಂದ ನೋಡಿದ ವಿಷಯವನ್ನು ತಮ್ಮು ಇನ್ನೂ ಮರೆತಿರಲಿಲ್ಲ; ಅವನನ್ನು ನಿಂಬೆಯ ಹಣ್ಣು ಹಿಂಡಿದಂತೆ ಹಿಂಡಿಬಿಡಬೇಕೆಂದು ಇವನಿಗೆ ಮಊಗಿನ ತನಕ ರಚ್ಚು ಇತ್ತು. ಆದುದರಿಂದ ಆ ಉರಿಯನ್ನು ತೀರಿಸಲು ಇವರಿಬ್ಬರ ಸಹಾಯವು ತನ

ಗಿದ್ದರೆ ಒಳ್ಳೆಯದೆಂದು ತಮ್ಮು ಯೋಚಿಸಿದ್ದ. ಇದು ತಮ್ಮುವನ್ನು ದೊಡ್ಡ ಹೊಂಡದಲ್ಲಿ ಕೆಡವಿತು. ಅವರಿಬ್ಬರು ಸ್ನೇಹಿತರ ಮಾತನ್ನೂ, ಮತವನ್ನೂ ಮೀರಿ, ಅವರ ಮನಸ್ಸನ್ನು ನೋಯಿಸಲು ತಮ್ಮುವಿಗೆ ಧೈರ್ಯಬರಲಿಲ್ಲ. ಈ ಕಾರಣದಿಂದ ಅವನಿಗೆ ವೆಚ್ಚವೂ, ವೇಳೆಯೂ ಬಹಳ ನಷ್ಟವಾಗುತ್ತಿದ್ದುವು. ದುರಭ್ಯಾಸಗಳೂ ಗಂಟುಬಿದ್ದುವು. 'ಫ್ಯಾಶನಿ'ಗೂ ಪ್ರಾರಂಭವಾಯಿತು. ಎರಡು ಹೊತ್ತು ಕಾಫಿ; ಸಿಕ್ಕಿದಂತೆ ಸಿಗರೆಟ್; ವಾರಕ್ಕೆರಡು ಕ್ಷೌರ; ನೆಕ್‌ಟೈ, ಕಾಲರ್, ಬೂಟ್ಸ್;—ಇವೆಲ್ಲ ತಮ್ಮುವಿಗೆ ತನ್ನಂತೆ ಬಂದುವು. ತಂದೆ ಕಳುಹುತ್ತಿದ್ದ ಹಣ ಸಾಲದೆ, ಸಾಲ, ಕಡಗಳು ಎಂದಿಗಿಂತ ಹೆಚ್ಚೇ ಆದುವು. 'ತಗಾದೆ'ಮಾಡುವವರಿಗೆ ಮೊದಲು ಹಣವನ್ನು ಹಂಚಿ, ಉಳಿದವರಿಗೆ ಏನಾದರೊಂದು ಸಮಾಧಾನವನ್ನು ತಮ್ಮು ಹೇಳುತ್ತಿದ್ದನು. ತಮ್ಮುಗೆ ಈಗ ಆಟ ಜೋರು, ಪಾಠ ಕಡಿಮೆ ಎಂದಾಯಿತು. ಗೆಳೆಯರ ಗೆಳತನದಿಂದ ಹಾಗಾಗಬೇಕಾಯಿತು.

ಹೀಗೆ ಕೆಲವು ದಿನಗಳು ದಾಟದುವು. ಅಷ್ಟರಲ್ಲಿ ವರ್ಷಾವಧಿಯ ಶಾಲಾ ಇನಸ್ಪೆಕ್ಷನಿನ ಮುಹೂರ್ತವೂ ಒದಗಿತು. ಆ ವಾರದಲ್ಲೆಲ್ಲ ಇನಸ್ಪೆಕ್ಷನಿನ ಸಿದ್ಧತೆಯೇ ಸಿದ್ಧತೆ. ಒಂದು ಕಡೆ ಶಾಲಾ ಕಟ್ಟೋಣದ 'ಚಿಲ್ಲರೆ' 'ರಿಪೇರಿ' ನಡೆಯುತ್ತಿತ್ತು. ಇನ್ನೊಂದು ಕಡೆ ಉಪಾಧ್ಯಾಯರ ತರಾತುರಿಯ ಕೆಲಸ ಜರಗುತಿತ್ತು. ತಿದ್ದದ ಪ್ರಬಂಧಗಳನ್ನು ತಿದ್ದಿ ಮುಗಿಸಿದವರು ಕೆಲವರು. ಸಾಲದವುಗಳನ್ನು ಬರೆಸಿ ತಿದ್ದಿದವರು ಕೆಲವರು. ಇನ್ನು ಡ್ರಾಯಿಂಗ್ ಮಾಸ್ಟರೋ? ತಿಂಗಳ ಕೆಲಸವನ್ನು ವಾರದಲ್ಲಿಯೇ ಮಾಡಿಸಿದ್ದರು. ರೈಟರಿಗಂತೂ ಕ್ಷಣಕಾಲ ಬಿಡುವಿಲ್ಲ. ಲೆಕ್ಕಪತ್ರಗಳನ್ನು ಬರೆದದ್ದೂ ಬರದದ್ದೇ. ಕೂಡಿಸಿದ್ದೂ ಕೂಡಿಸಿದ್ದೇ. ಕಳದದ್ದೂ ಕಳದದ್ದೇ. ಇನಸ್ಪೆಕ್ಷನ್ ಮುಗಿಯುವ ತನಕ ಅವರಿಗೆ ಊಟ ತಿಂಡಿಯ ಯೋಚನೆಯೂ ಇದ್ದಿಲ್ಲ.

ಇನಸ್ಪೆಕ್ಷನ್ ನಾಳೆ ಎನ್ನುವಾಗ, ರಾಮರಾಯನೂ, ರಾಮಸ್ವಾಮಿಯೂ ಬಂದು ತಮ್ಮುವಿಗೆ ತಗುಲಿಕೊಂಡರು. ಶಿವರಾಜಪುರಕ್ಕೆ ಪರವೂರಿನ ಒಂದು ನಾಟಕ ಕಂಪೆನಿ ಬಂದು ಕೆಲವು ದಿನಗಳಾಗಿದ್ದವು.

**ರಾಮುಸ್ವಾಮಿ:**—'ಏನಣ್ಣ! ಟೋಪಿ! ಊರಿಗೆ ಬಂದ ಪರವೂರವರಿಗೆ ಒಮ್ಮೆಯಾದರೂ ನಮ್ಮಂಥಾ ದೊಡ್ಡ ಮನುಷ್ಯರು ಭೇಟಿ ಕೊಡಬೇಡವೇ? ಆ ನಾಟಕ ಕಂಪೆನಿ ಬಂದು ಎಷ್ಟು ದಿನಗಳಾಯ್ತು! ಏನು ಕಥೆ! ಇವತ್ತಿನ ನಾಟಕಕ್ಕಾದರೂ ನಮ್ಮ ಕಾಣಿಗೆ ಅವರ ಡಬ್ಬಿಗೆ ಬೀಳಬೇಡವೇ? ಇಂದು ಅವರ ಕಡೆಯ ನಾಟಕ; ನಾಟಕ ಬಹಳ ಚೆನ್ನಾಗಿದೆಯಂತೆ.'

**ತಮ್ಮು:**—'ನನ್ನ ಕೈಯಲ್ಲಿ ದುಡ್ಡಿಲ್ಲ!'

**ರಾಮುಸ್ವಾಮಿ:**—'ಸಾಕೋ, ನಿನ್ನ ಭೋಗಾರ ದುಃಖ. ಯಾವಾಗಲೂ 'ದುಡ್ಡಿಲ್ಲ'ವೆಂದು ಹಲ್ಲುಕಿರಿ! ನಿನ್ನ ಹತ್ತಿರ ದುಡ್ಡಿರುವುದು ಯಾವಾಗ ಮತ್ತೆ?'

**ರಾಮರಾಯ:**—'ಹೋಗಲಿ ಬಿಡೋ! ದುಡ್ಡು ನಾನು ಕೊಡುತ್ತೇನೆ. ಅಂತೂ ಬಾರಯ್ಯ; ಒಟ್ಟಿಗೆ ಹೋಗುವ.'

**ತಮ್ಮು:**—'ನನಗೆ ಬೆಳಗಿನಿಂದ ಸಣ್ಣಕ್ಕೆ ತಲೆನೋವು.'

**ರಾಮುಸ್ವಾಮಿ:**—'ಅಗೋ! ಹೊಡೆದ ಇನ್ನೊಂದು ಆಕಾಶಬಾಣ. ಇದು ಹಸೀ ಸುಳ್ಳು. ಎಲಾ! ಟೋಪಿ! ನೀನು ನೋಡಲಿಕ್ಕೆ ಒಂದು ಚೋಟುದ್ದ; ಮೂರಮಟೇ ಕಾಯುಷ್ಟು. ಆದರೂ 'ಗಿಲಿಟ್' ಹಚ್ಚುವ ವಿದ್ಯೆ ಈಗಾಗಲೇ ಎಷ್ಟು ಸಂಪಾದಿಸಿದ್ದಿಯೋ! ನೀನು ಕಲಿತದ್ದಕ್ಕೆ ಕಣ್ಣಿಲ್ಲ ಕಣೋ!'

**ತಮ್ಮು:**—'ನಾಳೆ 'ಪರೀಕ್ಷೆ' (ಇನಸ್ಪೆಕ್ಶನ್) ಇದೆಯಲ್ಲ! ನಿದ್ದೆಗೆಟ್ಟರೆ ಬುದ್ಧಿ ಕೆಟ್ಟೀತಲ್ಲ!'

**ರಾಮುಸ್ವಾಮಿ:**—'ಆಹಾಹಾ! ನಿನ್ನ ನೆವಗಳೇ! ಒಂದಕ್ಕಿಂತ ಒಂದು ಗಂಧಕ್ಕಿಂತ ಪರಿಮಳ! ಅಲ್ಲವೋ! ಮುಠ್ಠಾಳ! ಇನಸ್ಪೆಕ್ಶನ್ ಯಾರಿಗೋ? ಮೇಸ್ತರುಗಳಿಗೆ ಅಲ್ಲವೇನೋ? ನಾಳೆಯ ದಿನದ ಉಡುಗೊರೆಗಳೆಲ್ಲಾ ಮೇಸ್ತರಿಗೇ ಕಣೋ! ನಮಗಲ್ಲ. ನಿತ್ಯ ನಮ್ಮನ್ನು ಹೆದರಿಸುತ್ತಾ ಇರುವವರು ವರ್ಷಕ್ಕೆ ಒಂದೆರಡು ದಿನವಾದರೂ ಇನಸ್ಪೆಕ್ಟರಿಗೆ ಹೆದರಿರಬೇಡವೇ?'

ತಮ್ಮ ಮನಸ್ಸಿಲ್ಲದ ಮನಸ್ಸಿನಿಂದ 'ಆಗಲಿ' ಎಂದ; ಅವರಿಬ್ಬರ ಬಲವಂತಕ್ಕೆ. ಅವರು ಇವನ ಒಪ್ಪಿಗೆ ಸಿಕ್ಕಿದುದೇ ಹೊರಟುಹೋದರು.

9–10ಕ್ಕೆ ಪುನಃ ಇಬ್ಬರೂ ಹೋಟೆಲ್ ಬಾಗಲಲ್ಲಿ ಸಿದ್ಧ. ರಾಮ ಸ್ವಾಮಿ, ತಮ್ಮು ಇದ್ದಲ್ಲಿಗೆ ಧಡಬಡನೆ ಹೋಗಿ, 'ಏಳು, ಏಳು ಹೊತ್ತಾಯಿತು. ಕಡೆಯ ನಾಟಕವೆಂದು ಜನ ಹಾಗೇ ಇರುವೆ ಸಾಲುಗಟ್ಟಿದಂತೆ ಹೋಗುತ್ತಾ ಇದ್ದಾರೆ. ನಾವು ನಡೆದುಕೊಂಡು ಹೋದರೆ, ಹೊತ್ತಾದೀತೆಂದು ಸೈಕಲನ್ನೂ ತೆಗೆದುಕೊಂಡು ಬಂದಿದ್ದೇವೆ. ಹೊರಡು ಬೇಗ' ಎಂದು ಹೇಳುತ್ತಾ ತಮ್ಮುವಿನ ಕೈ ಹಿಡಿದೆಳೆದ.

ತಮ್ಮು:—'ಸೈಕಲೇ? ರಾತ್ರಿ ಹೊತ್ತು? ನಾನೆಂದೂ ರಾತ್ರಿ ಸೈಕಲಿನಲ್ಲಿ ಓಡಾಡಿದವನಲ್ಲ.'

ರಾಮ:—'ಬಿಡೋ ನಿನ್ನ ಒಣಜಂಬ! ಹೊರಡು ಕೂಡಲೇ. ಜತೆಗೆ ನಾವಿಲ್ಲವೇನೋ? ಏನು ಹೆದರಿಕೆ ಸೈಕಲ್ ಬಿಡಲಿಕ್ಕೆ?'

ತಮ್ಮುವಿಗೆ ಆಗಿನಿಂದಲೂ ಉಭಯ ಸಂಕಟ. ನಾಟಕಕ್ಕೆ ಹೋಗಲಿಕ್ಕೇ ಅವನಿಗೆ ಮನಸ್ಸಿಲ್ಲ. ಹಾಗೆಂದು ಹೋಗದಿದ್ದರೆ ವಿಧಿಯಿಲ್ಲ; ಈ ರಾಹುಕೇತುಗಳು ರಟ್ಟೆಹಿಡಿದು ಜಗ್ಗುತ್ತಾ ಇದ್ದಾರೆ. ಹೇಗೂ 'ಬೇಕೋ, ಬೇಡವೋ' ಎಂದು ವೈರಾಗ್ಯದಿಂದ ಸೈಕಲಲ್ಲಿ ಕುಳಿತ. ೧೦ ನಿಮಿಷಗಳಲ್ಲಿ ನಾಟಕ ಮಂದಿರದ ಸಮೀಪಕ್ಕೆ ಬಂದ. ಸೈಕಲುಗಳ ಓಟ ಅಂದರೇನು? ಭರದಾಂಡು ಓಟ. ಸ್ಥಳ ಸಿಕ್ಕದು ಎಂಬ ಆತುರದಿಂದ.

ನಾಟಕದ ಆರಂಭವನ್ನು ಸೂಚಿಸುವ ಮೊದಲನೆಯ ಗಂಟೆ ಬಾರಿಸುತ್ತಿತ್ತು. ಟಿಕೆಟ್ ಮಾರುವಲ್ಲಿಯೋ? ಎಳ್ಳು ಹಾಕಲಿಕ್ಕೆ ಸ್ಥಳವಿಲ್ಲ. ಅಷ್ಟು ಜನ; ಅಂತಹ ನೂಕು, ನುಗ್ಗಲು. 'ಕಾಲು ಹೋಯ್ತು' ಎಂದು ಒಬ್ಬರು; 'ಜೇಬಿಗೆ ಸಿಕ್ಕಿಸಿದ್ದ ಫೌಂಟನ್ ಹೋಯ್ತು' ಎಂದು ಇನ್ನೊಬ್ಬರು; 'ದುಡ್ಡು ಕೊಟ್ಟೆ; ಟಿಕೇಟ್ ಬರಲಿಲ್ಲ' ಎಂತ ಮತ್ತೊಬ್ಬರು;—ಹೀಗೆ ನಾನಾ ಬಗೆಯ 'ಗೋಷ್ಠಿ'ಗಳು ಅಲ್ಲಿ ಕೇಳಿಸುತ್ತಿತ್ತು. ಈ ಸಮಯದಲ್ಲಿ, ಆ ಗುಂಪಿನಲ್ಲಿ ನುಗ್ಗಿ 'ಟಿಕೆಟ್' ಕೊಳ್ಳುವುದಕ್ಕೆ ಸಾಮರ್ಥ್ಯವೇ ಬೇಕು. ಆನೆ

ಯಂತಹ ಶಕ್ತಿಯೇ ಬೇಕು. ಆದರೂ ರಾಮರಾಯ ಮನಸ್ಸು ಕಲ್ಲು ಮಾಡಿಕೊಂಡು ಟಿಕೆಟಿಗಾಗಿ ತಾನೇ ಮುಂದೆ ನುಗ್ಗಿದ. ಸ್ವಲ್ಪ ಹೊತ್ತು ನುಗ್ಗಿನಲ್ಲಿ ಹೆಣಗಿದ. ಆ ಹೆಣಗಾಟದಲ್ಲಿ ಬಟ್ಟೆ ಹರಿದುಕೊಂಡ; ಟೋಪಿ ಕೆಳಗೆ ಹಾಕಿಕೊಂಡ. ಕೊನೆಗೆ ಹಾಗೂ ಹೀಗೂ ಸಂದಿಯಲ್ಲಿ ಕೈತೂರಿಸಿ, ರೂಪಾಯಿಯ 3 'ಟಿಕೆಟ್' ಪಡೆದ. ಪಡೆದು ಬರುವಷ್ಟರಲ್ಲಿ, ಕೊಟ್ಟ 5 ರೂಪಾಯಿಗಳ ನೋಟಿನಲ್ಲಿ, ಉಳಿದ 2 ರೂಪಾಯಿಗಳನ್ನು ಪಡೆಯಲಿಲ್ಲ ವೆಂದು ಪುನಃ ಹಿಂದೆ ಬಂದ. 'ಟಿಕಟ್ ಮಾಸ್ಟರ'ರನ್ನು ವಿಚಾರಿಸಿದ. ಅವರು 'ಇಲ್ಲ' ಅಂದರು. ಇವನು 'ಉಂಟು' ಅಂದ. ಅಲ್ಲಿಂದ ಅವ ರವರಿಗೆ ಭಾರೀ ಮಾತಾಯಿತು. ಕೊನೆಗೆ 'ನೀನು, ತಾನು' ಎಂದು ಬಂತು. ಅಷ್ಟರಲ್ಲಿ ಎರಡನೆ ಗಂಟೆ ಬಾರಿಸಿತು. ನಾಂದೀಶ್ಲೋಕ ಆರಂಭ ವಾಯಿತು. 'ಬಾರಯ್ಯ! ಹೋದರೆ ಹೋಗಲೇಳು' ಎಂದು ರಾಮಸ್ವಾಮಿ ರಾಮರಾಯನನ್ನು ಕೈಹಿಡಿದು ಎಳೆದುಕೊಂಡು ಹೋದ. ಹೋದರೆ ಅಲ್ಲಿ ಸ್ಥಳವೆಲ್ಲಿದೆ? ಎಲ್ಲಿಯೋ ಒಂದು ಮೂಲೆಯಲ್ಲಿ ಒಬ್ಬರಿಗೆ ಸಾಕಾಗುವಷ್ಟು ಸ್ಥಳವಿತ್ತು. ಅಲ್ಲಿಯೇ ಮೂರು ಮಂದಿಯೂ ಕುಳಿತರು. ಒಬ್ಬರ ಮೇಲೊ ಬ್ಬರು ಹೇರಿಕೊಂಡರು.

ಆರಂಭಿಸಿದ ನಾಟಕವು ಸರಾಗವಾಗಿ ಸಾಗಿತು. ಕಥೆ ಚೆನ್ನಾಗಿತ್ತು. ಸಂಗೀತವು ಇಂಪಾಗಿತ್ತು. ಮಾತುಗಳು ಕೇಳುವ ಹಾಗಿದ್ದವು. ಅಭಿ ನಯವು ಕೆಟ್ಟದ್ದಾಗಿರಲಿಲ್ಲ. ದೃಶ್ಯಾವಳಿಗಳೂ, ಪರದೆಗಳೂ, ಉಡುಗೆ ತೊಡುಗೆಗಳೂ ಸಮರ್ಪಕವಾಗಿದ್ದವು. ಪ್ರೇಕ್ಷಕರು ನಾಟಕವನ್ನು ನೋಡುತ್ತ ನೋಡುತ್ತ, ತಮಗೆ ಆನಂದವುಂಟಾದ ಕಡೆಯಲ್ಲೆಲ್ಲ ಚಪ್ಪಾಳೆ ತಟ್ಟುತ್ತಿ ದ್ದರು. ಮಧುರವಾಗಿ ಯಾರಾದರೂ ಹಾಡಿದಾಗ, 'ಇನ್ನೊಮ್ಮೆ ಹಾಡಿ' ಎಂದು ಕೂಗುತ್ತಿದ್ದರು. ಇದೆಲ್ಲ 'ಗೆಲರಿ' ತರಗತಿಯವರ ಕಡೆಯಿಂದಲೇ ವಿಶೇಷ. ಈ ದಿನ ನಾಯಕ—ನಾಯಕಿಯರ ಪಾತ್ರಗಳನ್ನು ವಹಿಸಿದವರೂ ಬಾಲಕನ ಪಾತ್ರವನ್ನು ಅಭಿನೈಸಿದ ಒಬ್ಬ ಸಣ್ಣ ಹುಡುಗನೂ ಪ್ರೇಕ್ಷಕರನ್ನು ಸ್ತಂಭಿತರಾಗುವಂತೆ ಮಾಡಿದ್ದರು. ವಿದೂಷಕನ ವೇಷವನ್ನು ಧರಿಸಿದವ

ನಾದರೂ ಸರಿಯೇ. ದರ್ಶಕರನ್ನು ಹೊಟ್ಟೆ ಹಣ್ಣಾಗುವಂತೆ ನಗಿಸಿ, ನಗಿಸಿ ಕೊಲ್ಲುತ್ತಿದ್ದನು

ತಮ್ಮು ನಾಟಕವನ್ನು ನೋಡುತ್ತ ನೋಡುತ್ತ ಅದರಲ್ಲಿಯೇ ತಲ್ಲೀನನಾಗಿದ್ದನು. ಆಯಾ ರಸಕ್ಕೆ ತಕ್ಕಂತೆ ನಟರು ನಟಿಸುತ್ತಿದ್ದಾಗ ಅವನು ನಗುವನು; ಕಣ್ಣಲ್ಲಿ ನೀರು ತಂದುಕೊಳ್ಳುವನು; ಇನ್ನೇನಾಗುವುದೋ ಎಂದು ಕುತೂಹಲದಿಂದ ಕಾಯುವನು. ಅವನಿಗೀಗ 'ಇನಸ್ಪೆಕ್ಟನಿನ' ಸಮಾಚಾರವೆಲ್ಲ ಮರೆತಿದೆ. ಸ್ವಲ್ಪ ಹೊತ್ತಿಗೆ ಮೊದಲು ಅವನಲ್ಲಿ ಉಂಟಾದ ಎದೆಗುದಿಯೆಲ್ಲ ತಣ್ಣಗಾಗಿದೆ.

ರಾತ್ರಿ 2 ಗಂಟೆಗೆ ನಾಟಕವು ಮುಗಿಯಿತು. ಮುಗಿದೊಡನೆ ಈ ಮೂವರೂ ಮನೆಗೆ ಹೊರಟರು. ಹೊರಡುವಾಗ ರಾಮಸ್ವಾಮಿ, ತಮ್ಮುವನ್ನು ಕುರಿತು, 'ಹೇಗಿತ್ತು, ನಾಟಕ?' ಎಂದು ಕೇಳಿದ.

**ತಮ್ಮು:**—'ಬಹಳ ಸೊಗಸಾಗಿತ್ತು. ಇಂಥಾ ನಾಟಕಗಳನ್ನು ನಾನೆಂದೂ ನೋಡಿರಲಿಲ್ಲ.'

**ಸುಬ್ಬ:**—'ಹಾಗೆ, ಬಾ! ಹಾಗೆ,—ನಾವು ಈ ದಿನ ನಾಟಕಕ್ಕೆ ಬಾರದಿದ್ದರೆ ಎಂಥಾ ಸಂದರ್ಭ ತಪ್ಪಿಹೋಗುತ್ತಿತ್ತು, ಬಲ್ಲೆಯಾ? ಈಗ ನೀನೇ ಹೇಳು; ನಿನಗೆ ನಾಳಿನ 'ಇನಸ್ಪೆಕ್ಟನ್' ಹೆಚ್ಚೋ, ಇವತ್ತಿನ ನಾಟಕ ಹೆಚ್ಚೋ?'

'ಇನಸ್ಪೆಕ್ಟನ್' ಎಂದ ಕೂಡಲೇ, ತಮ್ಮುವಿಗೆ ಗುಂಡು ಸೂಜಿ ಚುಚ್ಚಿದ ಹಾಗಾಯಿತು. 'ನಡೆಯಿರಿ, ಹೋಗೋಣ! ರಾತ್ರಿ ಬಹಳವಾಯ್ತು' ಎಂದು ಅವನು ಹೇಳಿದ.

'ನಿನ್ನ ಹೋಟಲು ತನಕ ನಾವೇಕೆ ಈಗಲೂ ಬರುವುದು? ನೀನು ನಿನ್ನಷ್ಟಕ್ಕೆ ಹೋಗು; ನಾವು ನಮ್ಮಷ್ಟಕ್ಕೆ ಹೋಗುತ್ತೇವೆ' ಎಂದು 'ಸಿಗರೇಟ್' ಬಾಯಲ್ಲಿಟ್ಟುಕೊಂಡು ಅವರಿಬ್ಬರೂ ಸೈಕಲ್ ಹತ್ತಿ, ಅವರ ಪಾಡಿಗೆ ಹೋದರು. ತಮ್ಮುವೂ ಹೋಟಲ ಕಡೆಗೆ ಸೈಕಲ್ ಬಿಟ್ಟ.

ಸೈಕಲ್ ಬಿಟ್ಟು 5 ನಿಮಿಷವಾಗಿದೆ,—ತಮ್ಮು ಒಂದು ಕಡೆ; ಸೈಕಲ್ ಒಂದು ಕಡೆ. ಇದಿರಿಗೆ ಬರುತ್ತಿದ್ದ ಒಂದು ಜಟ್ಕಾದ ಚಕ್ರಕ್ಕೆ ಆ ಸೈಕ

ಲಿನ ಮುಂಭಾಗವು ಸೋಂಕಿ, ಸೈಕಲೂ, ತಮ್ಮುವೂ ಉರುಳಿದ್ದಾರೆ. ಅಷ್ಟರಲ್ಲಿ ಜಟ್ಕದ ಒಳಗಿದ್ದ ಯಾರೋ ಒಬ್ಬರು ಗಾಬರಿಯಿಂದ 'ಪೆಟ್ಟಾ ಯಿತೇ?' ಎಂದು ಕೇಳಿದರು.

ತಮ್ಮುವಿಗೆ ಸಿಡಿಲು ಹೊಡೆದ ಹಾಗಾಯಿತು. ಅವನಿಗೆ ಧ್ವನಿಯಿಂದ ತಿಳಿಯಿತು;—ಗಾಡಿಯೊಳಗಿದ್ದವರು ಬೇರೆ ಯಾರೂ ಅಲ್ಲ;—'ಹೆಡ್ಮಾಸ್ಟರ್' ಎಂದು.

ಹೆಡ್‌ಮಾಸ್ಟರ್ ಗಾಡಿಯಿಂದ ಇಳಿದರು. ನೋಡಿದರು; 'ತಮ್ಮು!'. ತಮ್ಮುವಿಗೆ ಪೆಟ್ಟಾಗಿರಲಿಲ್ಲ. ಅವನು ಸೈಕಲ್ ಹಿಡಿದುಕೊಂಡು, ತಲೆ ಬಗ್ಗಿಸಿ ನಿಂತಿದ್ದ.

ಹೆಡ್ಮಾಸ್ಟರರಿಗೆ ಸಿಟ್ಟು ಬಂದು ಏನೂ ಕೂಡದು. ಅವರು ಗಂಭೀರ ವಾದ ಸ್ವರದಿಂದ 'ನಾಳೆ ಸಂಜೆ 5 ಗಂಟೆಗೆ ನನ್ನ ಕೋಣೆಗೆ ಬಂದು ನನ್ನನ್ನು ನೋಡು' ಎನ್ನುತ್ತ ಜಟ್ಕ ಹತ್ತಿ ಹೊರಟು ಹೋದರು. ಅವರೂ ನಾಟಕವನ್ನು ನೋಡಲು ಬಂದಿದ್ದರು.

ತಮ್ಮು ಮಣ್ಣಾಗಿದ್ದ ಅಂಗಿ ಬಟ್ಟೆಗಳನ್ನು ಕೊಡವಿಕೊಂಡು, ಸೈಕ ಲನ್ನು ಕೈಯಲ್ಲಿ ಹಿಡಿದುಕೊಂಡು ಹೋಟಲಿಗೆ ಹೋದ. ಮಲಗಿದ. ಆದರೆ ಅವನಿಗೆ ಬೆಳಕಿನ ತನಕ ಕಣ್ಣಿಗೆ ಕಣ್ಣು ಹಚ್ಚಿ ನಿದ್ರೆ ಬರಬೇಕಲ್ಲ!

---

## ಇಪ್ಪತ್ತನೆಯ ಅಧ್ಯಾಯ.

## ಬಿಟ್ಟದಂತೆ ಬಂದುದು ಮಂಜಿನಂತೆ ತೇಲಿಹೋಯಿತು.

ಆ ದಿನ 'ಇನಸ್ಪೆಕ್ಶನ್.' ಇನಸ್ಪೆಕ್ಶನಿಗಾಗಿ ಎಲ್ಲವೂ ಸಿದ್ಧವಾಗಿತ್ತು. ಶಾಲೆಯ ಒಳಗೂ, ಹೊರಗೂ ಎಲ್ಲೆಡೆಯಲ್ಲಿಯೂ ನಿರ್ಮಲ,—ಕಸಕಡ್ಡಿ, ಕಾಗದದ ಚೂರು ಹುಡುಕಿದರೂ ಇಂದು ಸಿಕ್ಕುವ ಹಾಗಿರಲಿಲ್ಲ. ಜವಾನ ಸಿದ್ಧಪ್ಪ, ಎಂದಿಗಿಂತ ಮೊದಲೇ ಶಾಲೆಯ ಬಾಗಿಲು ತೆರೆದು, ಜಾಗರೂಕತೆ

ಯಿಂದ ಕಸಗುಡಿಸಿ, ಕನ್ನಡಿಯ ಹಾಗೆ ಮಾಡಿಟ್ಟಿದ್ದಾನೆ. ತೋರಣ, 'ಸುಸ್ವಾಗತ'ದ ಬೋರ್ಡ್ ಇವೆರಡು ಇದ್ದಿರಲಿಲ್ಲ. 'ಅಗತ್ಯವಲ್ಲ'ವೆಂದು ಹೆಡ್ಮಾಸ್ತರರ ಅಪ್ಪಣೆಯಾಗಿತ್ತು.

ಈ ದಿನ ಜವಾನರ 'ಡ್ರೆಸ್' ನೋಡಬೇಕು! ಹರಕು ಅಂಗಿ ಇಲ್ಲ. ಕೊಳಕು ಪಂಚೆ ಇಲ್ಲ. ಒರೇ ಬಟ್ಟತಲೆ ಇಲ್ಲ. ಅವರು ಇಂದು ಚೊಕ್ಕಟವಾದ 'ದಿರಿಸಿ'ನಲ್ಲಿ ಬಂದಿದ್ದಾರೆ. ಮಡಿಯಾದ ಬಟ್ಟೆಗಳನ್ನು ಉಟ್ಟಿದ್ದಾರೆ. ಮಡಿಯಾದ ಅಂಗಿ, ರುಮಾಲುಗಳನ್ನು ಧರಿಸಿದ್ದಾರೆ. ಜವಾನರ ಪಟ್ಟಿಗಳನ್ನು ಹೊರಗೆ ತೆಗೆದು, ಕೊಡವಿ, ಒರಸಿ, ಹರಿದಲ್ಲಿ ಹೊಲಿಸಿ ಕತ್ತಿಗೆ ಹಾಕಿಕೊಂಡಿದ್ದಾರೆ. ಅದರ ಮೇಲೆ ಅಂಗೈಯಗಲ ಬಿಲ್ಲೆ. ತಿಕ್ಕಿ ತೊಳೆದ ಆ ಹಿತ್ತಾಳೆಯ ಬಿಲ್ಲೆಗಳು ಬಂಗಾರದ ಹಾಗೆ ಹೇಗೆ ಹೊಳೆಯುತ್ತಿವೆ!

ಉಪಾಧ್ಯಾಯರೂ ಈ ದಿನ ಹೊತ್ತಿಗೆ ಮೊದಲೇ ಬಂದಿದ್ದಾರೆ. ಅವರ ಉಡಿಗೆಯಲ್ಲಿ ವಿಶೇಷವೆಂದರೆ,—ಮುಂಡಾಸುಗಳೇ. ನಿತ್ಯಗಟ್ಟಲೆಯಲ್ಲಿ ಮುಂಡಾಸು ಕಟ್ಟದವರು ಕೆಲವು ಮಂದಿ. ಕಟ್ಟಲು ಬಾರದವರೂ ಕೆಲವು ಮಂದಿ. ಆ ಮಂದಿಗೆ ಈ ಮುಂಡಾಸುಗಳನ್ನು ವರ್ಷಕ್ಕೊಮ್ಮೆ ಕಟ್ಟುವುದೂ, ಕಟ್ಟಿಸುವುದೂ, ಕಟ್ಟಿದುದು ಬಿಚ್ಚಿ ಹೋಗದಂತೆ ಜೋಪಾಸನವಿಡುವುದೂ, ದಿನವೆಲ್ಲ ಅದನ್ನು ತಲೆಯಲ್ಲಿ ಹೊತ್ತು ಓಡಾಡುವುದೂ ಅದೊಂದು ದೊಡ್ಡ ರಗಳೆಯಾಗಿತ್ತು. ಆದರೂ 'ಈ ಶಾಲೆಯಲ್ಲಿ 'ಇನಸ್ಪೆಕ್ಟನ್' ಈ ದಿನ'ವೆಂದು ಊರಿಗೆಲ್ಲ ಸಾರುವುದು ಅಪರೂಪದ ಆ ಮುಂಡಾಸೇ ಆಗಿತ್ತು.

ಹಿರಿಯ ಜವಾನನಾದ ಮಾದಯ್ಯನು ವಯಸ್ಸಾದವನು. ತುಂಬ 'ಸರ್ವೀಸು'ದಾರ. ಅವನಿಗೆ ವರ್ಷಗಳು 55 ದಾಟಿದ್ದರೂ, ಹಳಬನೆಂದು, ನಂಬಿಗಸ್ತನೆಂದು ಮತ್ತೆರಡು ವರ್ಷ ಕೆಲಸಕೊಟ್ಟಿದ್ದರು. ಅವನಿಗೆ ಓದಿಲ್ಲ; ಬರಹವಿಲ್ಲ; ಅನುಭವ. ಅನುಭವಕ್ಕಿಂತಲೂ ಮೊಳ ಉದ್ದದ ನಾಲಿಗೆ, ಮಾರುದ್ದದ ಗಲ್ಲುಮೀಸೆ;—ಇವೇ ಅವನ ಮುಖ್ಯ ಬಂಡವಾಳ. ಅವನು ಶಾಲೆಯಲ್ಲಿ ಇತರ ಜವಾನರಿಂದ ಬೈದು ಅಂದು ಕೆಲಸಮಾಡಿಸುವನು.

ರೈಟರರ ಮನೆಯಲ್ಲಿಯೂ, ಹೆಡ್‌ಮಾಸ್ಟರರ ಮನೆಯಲ್ಲಿಯೂ ತಾನೇ ಕಷ್ಟಪಟ್ಟು ಕೆಲಸಮಾಡುವನು. ಅವನ ಮೇಲೆ ಯಾರ ದೂರೂ ಇಲ್ಲ. ಕಿರಿಯ ಜವಾನರು ಮಾತ್ರ ಕೆಲಸಮಾಡಿಸಿ ಕೊಲ್ಲುತ್ತಾನೆಂದು ಹಿಂದುಗಡೆಯಲ್ಲಿ ಗೊಣಗುತ್ತಿದ್ದರು.

ಮಾದಯ್ಯ ಇಂಥ ಎಷ್ಟೋ ಇನಸ್ಪೆಕ್ಶನನ್ನು ಕಂಡವ. ತನ್ನ ಈ ವಯಸ್ಸಿನಲ್ಲಿ ಇಂಥ ಎಷ್ಟೋ ಇನಸ್‌ಪೆಟ್ಟರನ್ನು ನೋಡಿದವ. ಅವನಿಗೆ ಇನಸ್ಪೆಕ್ಶನಿನ ಸಮಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ಚೆನ್ನಾಗಿ ಗೊತ್ತಿತ್ತು. ಅದೇ ಅವನು, ಹೆಡ್ಡಾಳಾದರೂ ಒಡ್ಡಾಳಾಗಿರಬೇಕೆಂದು ಹೆಡ್ಮಾಸ್ಟರರ ಕೋಣೆಯ ಬಳಿಯಲ್ಲಿಯೇ ಓಡಾಡುತ್ತ, ಗಲ್ಲಮೀಸೆಯನ್ನು 'ಮಾಲೀಸು' ಮಾಡುತ್ತ, ಆಗಾಗ ಹೆಬ್ಬಾಗಿಲ ಕಡೆಗೆ ಕಣ್ಣು ಹಾಕುತ್ತಿದ್ದನು; ಹದ್ದಿನಂತೆ ದೃಷ್ಟಿಯನ್ನು ಅಲ್ಲಿಗೆ ಓಡಿಸುತ್ತಿದ್ದನು. ಅಷ್ಟರಲ್ಲಿ ಬಂತು ಒಂದು ಜಟಕ. ಓಡಿದ ಮಾದಯ್ಯ. ಜಟಕ ನಿಂತೊಡನೆಯೇ ತೆಗೆದ ಜಟಕದ ಬಾಗಿಲು. ಬಗ್ಗಿ ದೊಡ್ಡದೊಂದು ನಮಸ್ಕಾರ ಹೊಡೆದ ಇನಸ್ಪೆಕ್ಟರರಿಗೆ. ಗಾಡಿಯೊಳಗಿದ್ದ ಅವರ ರಿಕಾರ್ಡಿನ ಪೆಟ್ಟಿಗೆಯನ್ನು ತಾನೇ ಹೊತ್ತು, ಹೆಡ್ಮಾಸ್ಟರರ ಕೋಣೆಗೆ ತಂದಿಟ್ಟ. ಇನಸ್ಪೆಕ್ಟರಿಗೆ ಮೊದಲು ನಮಸ್ಕಾರ ಮಾಡುವುದು, ಅವರ 'ರಿಕಾರ್ಡ್' ಪೆಟ್ಟಿಗೆ ಹೊತ್ತಿಡುವುದು—ಇವೆರಡೂ ಮಾದಯ್ಯನಿಗೆ ದೊಡ್ಡ ಗೌರವ. ಹಲವರಿಗೆ ದೊರೆತನದ ಬಿರುದು ಸಿಕ್ಕಿದ ಹಾಗೆ.

ಇನಸ್ಪೆಕ್ಟರರು ಹೆಡ್ಮಾಸ್ಟರರ ಕೋಣೆಯಲ್ಲಿ ಕೊಂಚ ಕುಳಿತು, 6ನೆಯ ಫಾರ್ಮಿಗೆ ಹೊರಟರು. ಮಾದಯ್ಯ ಓಡುತ್ತಾ ಅವರಿಗೆ ಅಲ್ಲಿಗೆ ದಾರಿ ತೋರಿದ.

ಈ ಇನಸ್ಪೆಕ್ಟರರು ಕಿರಿಯವರು. ಹಿರಿಯರ ಸಹಾಯಕರು. ಅದೇ ಅವರು 6ನೇ ಫಾರ್ಮಿಗೆ ಬಂದವರೇ ಕನ್ನಡ ಪಾಠಪುಸ್ತಕವನ್ನು ಕೈಯಲ್ಲಿ ಹಿಡಿದರು. ಒಬ್ಬಿಬ್ಬರು ವಿದ್ಯಾರ್ಥಿಗಳಿಂದ ಪದ್ಯಗಳನ್ನು ಹೇಳಿಸಿದರು, ರಾಗವಾಗಿ. ಆ ಮೇಲೆ ಸಂಧಿ, ಸಮಾಸ, ಅರ್ಥ, ಅನ್ವಯಗಳ ಕಲಾಪವೆಲ್ಲ ಮುಗಿದು ಪ್ರಬಂಧವನ್ನು ಬರೆಯಲು ಕೊಟ್ಟುದುದಾಯ್ತು. ಬರೆದ ಮೇಲೆ,

ಬರೆದುಕೊಟ್ಟಿದನ್ನು ಕಟ್ಟುಕಟ್ಟಿ ಕಟ್ಟಿಕೊಂಡು ಹೊರಹೊರಟದ್ದಾಯಿತು. ಅಲ್ಲಿಗೆ ಒಂದು ಪರೀಕ್ಷೆ ಮುಗಿಯಿತು.

ಮಾದಯ್ಯ ಈ ಇನಸ್ಪೆಟ್ಟರನ್ನು ಕ್ಲಾಸಿಗೆ ತಂದು ಬಿಟ್ಟವನೇ ಪುನಃ ಓಡಿದ. ದೊಡ್ಡ ಇನಸ್‌ಪೆಟ್ಟರನ್ನು ಕರೆತರಲಿಕ್ಕೆ. ಅವರೂ ಬಂದರು ಸ್ವಲ್ಪ ಹೊತ್ತಿನಲ್ಲಿ. ಯಥಾಪ್ರಕಾರ ಓಡಿದ ಮಾದಯ್ಯ. ಜಟ್ಕದ ಬಾಗಿಲು ತೆಗೆದ. ಸಲಾಂ ಹೊಡೆದ. ಪೆಟ್ಟಿಗೆ ತಂದಿಟ್ಟ. ಬಾಗಿಲ ಬಳಿ ನಿಂತ.

ಇನಸ್ಪೆಕ್ಟರರು ಹೆಡ್ಮಾಸ್ಟರರ ಜತೆಯಲ್ಲಿ ರೈಟರರ ಕೋಣೆಗೆ ಹೊಕ್ಕರು. ರೈಟರರ ಲೆಕ್ಕಪತ್ರಗಳನ್ನು 'ತನ್ಖಿ' ಮಾಡಲು ತೊಡಗಿದರು. ರೈಟರರು ಬೇಕಾದ ಎಲ್ಲ ಲೆಕ್ಕಪತ್ರಗಳನ್ನೂ ರಾತ್ರಿ ಹಗಲೆನ್ನದೆ ಬರೆದು ಪೂರೈಸಿದ್ದರೂ, ಎಲ್ಲಿ, ಏನೋ ಎಂಬ ದಿಗಿಲು ಅವರಿಗೆ ಇನ್ನೂ ಬಲವಾಗಿ ಅಂಟಿಕೊಂಡಿತ್ತು. ಅವರು ಹೆದರಿ, ಹೆದರಿ ಕೇಳಿಕೇಳಿದ ಲೆಕ್ಕಪತ್ರಗಳನ್ನು ಅವಸರವಸರವಾಗಿ ಮುಂದೆ ನೂಕುತ್ತಾ, 'ತನ್ಖಿ'ಯನ್ನು ಕಷ್ಟದಿಂದ ಕೊನೆ ಮುಟ್ಟಿಸಿದರು.

ಇನಸ್ಪೆಕ್ಟರರು ಅಲ್ಲಿಂದ ಹೊರಟು 6ನೆಯ ಫಾರ್ಮಿಗೆ ಬಂದರು. ಇಂಗ್ಲೀಷ್ ಪದ್ಯವೊಂದನ್ನು ಎತ್ತಿಕೊಂಡರು. ತಮ್ಮುವಿಗೆ ನಿನ್ನೆ ರಾತ್ರಿಯ ನಾಟಕದ ನಿದ್ದೆ;–ಕಣ್ಣು ಹೊಸಕಿಕೊಳ್ಳುತ್ತಾ ಇದ್ದ. ನೋಡಿದರು. ಇವನೇ ಪರಮಾನಂದ ಶಿಷ್ಯ ಎಂದರು. ಮೆತ್ತಗೆ ಹಿಡಿದುಕೊಂಡರು ಅವನನ್ನು. ತಮ್ಮು ಗಾಬರಿಬಿದ್ದ. ಯಂತ್ರದಂತೆ ಎದ್ದುನಿಂತ. ನಿದ್ದೆಯ ಆಲಸ್ಯದಲ್ಲಿ ಇನಸ್ಪೆಕ್ಟರರ ಪ್ರಶ್ನೆಯೇ ಕಿವಿಗೆ ಬಿದ್ದಿಲ್ಲ ಅವನಿಗೆ. ಏನು ಉತ್ತರ ಹೇಳಿಯಾನು? ಸುಮ್ಮನಿದ್ದ. ಇನಸ್ಪೆಕ್ಟರರ ಕುರ್ಚಿಯ ಹಿಂದೆ ನಿಂತಿದ್ದ ಅವನ 'ಇಂಗ್ಲೀಷ್ ಮೇಸ್ಟರ'ರು 'ಉತ್ತರ ಹೇಳು' ಎಂದು ಕಣ್ಣು ಪಿಳಿಕಿಸಿದರು. ಕಣ್ಣು ಒತ್ತಿದರು. ಕಣ್ಣು ಅರಳಿಸಿದರು. ಕಣ್ಣು ತಿರುಗಿಸಿದರು. ತಮ್ಮು ಇಷ್ಟೂ ನೋಡಿದ. ಹಾಗೆ ತಲೆ ಬಗ್ಗಿಸಿದ. 'ಸುಮ್ಮನಿದ್ದವನನ್ನು ಬ್ರಹ್ಮನೂ ಗೆಲ್ಲಲಾರ' ಎಂಬಂತೆ ಮತ್ತೂ ಮೌನವಾಗಿದ್ದ. ಮೇಸ್ಟರಿಗೋ?

ಆರಂಭದಲ್ಲಿಯೇ ಅಪಶಕುನ. 'ಷರಾ' ಇನ್ನೇಂಥಾದ್ದೋ ಎಂಬ ದಿಗಿಲು ಒಂದು ಕಡೆ. ಎಲ್ಲಿ ವಿದ್ಯಾರ್ಥಿಗಳ ಮುಂದೆ ಏನಾದರೂ ಅಂದು ತನ್ನ ಮಾನ ಕಳೆಯುತ್ತಾರೋ ಎಂಬ 'ತಿಪು, ತಿಪು' ಇನ್ನೊಂದು ಕಡೆ.

ಪ್ರಶ್ನೆ ತಮ್ಮುವಿನಿಂದ ಇನ್ನೊಂದು ಕಡೆಗೆ ಹಾರಿತು. ಉತ್ತರವಿಲ್ಲ. ಮತ್ತೊಂದು ಕಡೆ. ಉತ್ತರ ಬಂತು! ಮತ್ತೆ ಪ್ರಶ್ನೆಗಳ ಸರಮಾಲೆ; ಒಂದರ ಮೇಲೊಂದು. ಹಲವು ಪ್ರಶ್ನೆಗಳು ಹಟ ಹಿಡಿದಂತೆ ತಮ್ಮುವಿಗೇ. ತಮ್ಮು ಒಂದಕ್ಕೇನೋ ತಡವರಿಸುತ್ತಾ ಅರ್ಧ ಉತ್ತರ ಹೇಳಿದ. ಮಿಕ್ಕವುಗಳಿಗೆ ಅಷ್ಟೂ ಇಲ್ಲ. ಕೂತ; ಎದ್ದ; ಎದ್ದ, ಕೂತ;—ಅಷ್ಟೇ. ತಮ್ಮು ಆಗಲೇ ಖಂಡಿತ ಮಾಡಿಕೊಂಡ:—'ಈ ದಿನ ಮೇಸ್ಟರರು ಹಿಡಿದ ಗ್ರಹಚಾರ ಬಿಡಿಸುತ್ತಾರೆ' ಎಂದು. ಮೇಸ್ಟರರ ಮುಖ ನೋಡಿದರೂ ಆ ಮುಖದಲ್ಲಿ ಅದೇ ಮಾತೇ ಬರೆದ ಹಾಗಿತ್ತು.

'ತಮ್ಮು ಬುದ್ಧಿವಂತನಾಗಿ ಹೀಗೆ ಮಾಡಿದ; ಕೆಟ್ಟ ಹೆಸರಿಗೆ ದಾರಿ ಮಾಡಿಟ್ಟ' ಎಂದು ಆ ಮೇಸ್ಟರರ ನೆತ್ತಿಗೇರಿದ ಸಿಟ್ಟು ಅಷ್ಟಿಷ್ಟಲ್ಲ. ಇನಸ್ಪೆಕ್ಟರರು ಹೊರಗೆ ಹೊರಟ ಕೂಡಲೇ ತಮ್ಮುವಿನ ತಲೆಯ ಕುಡಿ ಎಲ್ಲಿ ಯಾದರೂ ಅವರ ಕಣ್ಣಿಗೆ ಬಿದ್ದಿದ್ದರೆ, ಅವರು ಆ ತಲೆಬುರುಡೆಯನ್ನು ನೆಲಕ್ಕೆ ಜಪ್ಪಿ ಚೂರು ಚೂರು ಮಾಡುತ್ತಿದ್ದರೋ ಏನೋ! ಹೇಗೂ ತಮ್ಮು ಆಗ್ಗೆ ಅವರ ದೃಷ್ಟಿಗೆ ಬೀಳದೆ ತಪ್ಪಿಸಿಕೊಂಡ. ಅವರಿಗೂ ಬೇರೆ ಕ್ಲಾಸಿಗೆ ಹೋಗಬೇಕಾಗಿತ್ತು. ಹೊರಟುಹೋದರು. ಅನಂತರದ 'ಕ್ಲಾಸ್ ಇನ ಸ್ಪೆಕ್ಷನಿನಲ್ಲಿ' ಈ ಉಪಾಧ್ಯಾಯರಿಗೆ ಯಾವುದೊಂದು ಕಂಟಕವೂ ಉಂಟಾಗ ಲಿಲ್ಲ. ದೇವರ ದಯೆಯಿಂದ ಎಲ್ಲವೂ ತೃಪ್ತಿಕರವಾಗಿತ್ತು. ಆ ಕಾರಣ, ಉಪಾಧ್ಯಾಯರಿಗೆ ಕ್ರಮಶಃ ತಮ್ಮುವಿನ ಮೇಲಿದ್ದ ಸಿಟ್ಟು ಇಳಿದು, ಅದರ ಛಾಯೆ ಮಾತ್ರ ಉಳಿದಿತ್ತು.

ಸಂಜೆ ಶಾಲೆ ಬಿಟ್ಟ ಮೇಲೆ, ತಮ್ಮು, ಜೋಲುಮುಖ ಹಾಕಿಕೊಂಡು, ಬರುತ್ತಾ ಇದ್ದ. ಸಿಕ್ಕಿಬಿದ್ದ ಈಗ. ಕರೆದರು ಇಂಗ್ಲಿಷ್ ಮೇಸ್ಟರರು. 'ಏನಪ್ಪಾ, ಇದು? ಹೀಗಾಗಿ ಹೋದೆ? ನಿನ್ನ ಹಣೆಯ ಬರಹ ಇಷ್ಟಕ್ಕೆ

ಬಂತೇ? 'ಬುದ್ಧಿವಂತ' ಎಂಬ ಪಿತ್ಥ ನಿನ್ನ ನೆತ್ತಿಗೆ ಅಡರಿ ಹೋಯಿತೇ? ಪ್ರಶ್ನೆಗಳು ಎಷ್ಟು ಸುಲಭ! ಚಕ್ರಪಾಣಿ ಉತ್ತರ ಹೇಳಿದ. ನಿನಗೆ ಸುಸೂತ್ರ ವಾಗಿ ಉತ್ತರ ಹೇಳಲು ಆಗದೆ ಹೋಯಿತೇ? ಏನು ಅನ್ಯಾಯ! ನೀನೇನು ತಂದೆತಾಯಿಗಳ ದುಡ್ಡನ್ನು ಹಾಳು ಮಾಡಲು ಇಲ್ಲಿಗೆ ಬಂದವನೇ? ನನಗೂ, ಶಾಲೆಗೂ ಅಪಕೀರ್ತಿ ಹೊರಿಸಲು ಸಾರಥಿಯಾದವನೇ? ಪುಣ್ಯಕ್ಕೆ ಹೆಡ್ಮಾಸ್ಟರಿರಲಿಲ್ಲ ಆಗ;– ಬದುಕಿಕೊಂಡೆ! ಇದ್ದಿದ್ದರೆ ನಿನ್ನ ಪಾಡೇನಾಗುತ್ತಿತ್ತೋ! ನೋಡು,—ಈಗಲೇ ಹೇಳುತ್ತೇನೆ. ನನ್ನನ್ನು ದೂರಿಕೊಳ್ಳಬೇಡ. ನೀನು ಹೀಗೆಯೇ ಮಾಡುತ್ತ ಬಂದರೆ ಪರೀಕ್ಷೆಗೆ ನಿನ್ನನ್ನು ಕಳುಹಿಸುವುದಿಲ್ಲ, ಖಂಡಿತ'. ಎಂದು ದರ್ಪದೊಡನೆ ಹೇಳಿದರು.

ತಮ್ಮುವಿಗೆ ಚೇಳು ಕಡಿದ ಹಾಗಾಯಿತು. ಆ ಮಾತಿನ ಗಾಯದ ಉರಿ ಅವನ ಮನಸ್ಸಿನಲ್ಲೆಲ್ಲ ವ್ಯಾಪಿಸಿತು. ಅವನಿಗೆ ಈಗ ಮಾತಾಡುವ ಶಕ್ತಿ ಉಡುಗಿತು. ಅವನು ಬಂಡೆಕಲ್ಲಿನಂತೆ ನಿಂತ.

ಅವನ ಅವಸ್ಥೆಯನ್ನು ಉಪಾಧ್ಯಾಯರು ನೋಡಿದರು. ಇವನಿಗೆ ಇಷ್ಟು ಮಾತು ಬೇಕಿರಲಿಲ್ಲವೆಂದು ಕನಿಕರಪಟ್ಟರು. ಪ್ರೀತಿಯಿಂದ 'ಹೋಗಪ್ಪ, ತಮ್ಮೂ! ಇನ್ನಾದರೂ ಚೆನ್ನಾಗಿ ಓದು, ಹೋಗು. ಹುಡುಗಾಟಕ್ಕೆ ಮನಸ್ಸು ಕೊಡಬೇಡ. ಪರೀಕ್ಷೆಗೆ ಸಮಯ ಹತ್ತಿರ ಬಂತು. ನೀನು ಕ್ಲಾಸಿನಲ್ಲಿ ಮೊದಲನೆಯವನಾಗಿ ಪಾಸಾಗಬೇಕು. ಓದಿದರೆ, ಆಗುವೆ' ಎಂದು ಅವನ ಬೆನ್ನು ತಟ್ಟಿದರು. ತಮ್ಮು ಕಣ್ಣೀರೊರಸಿಕೊಂಡು ಅಲ್ಲಿಂದ ಹೊರಟ.

ಹೊರಟವನೇ ಹೆಡ್ಮಾಸ್ಟರರ ಕೊಟ್ಟಡಿಯ ಕಡೆ ಬರುತ್ತಾ ಇದ್ದ;— ನಿನ್ನೆ ರಾತ್ರಿ ಹೇಳಿದ್ದ ಹಾಗೆ. ಅವನಿಗೆ ಈಗ ನಡೆಯಲು ಕಾಲುಗಳೇ ಬಾರವು. 'ಕೆಟ್ಟೆನಲ್ಲ!' ಎಂದುಕೊಂಡ. 'ಹುಲಿಯ ಕೈಯಿಂದ ಪಾರಾದೆ. ಸಿಂಹದ ಬಾಯಿಯಿಂದ ಹೇಗೆ ಬದುಕಲಿ?' ಎಂದುಕೊಂಡ, ಆದರೂ ಯತ್ನವಿಲ್ಲದೆ ಕೊಟ್ಟಡಿಯ ಬಳಿಗೆ ಬಂದ. ಬಾಗಿಲ ಮೂಲೆಯಲ್ಲಿ ನಿಂತು ಗೋಡೆಯ ಸುಣ್ಣ ಕೆರೆಯುತ್ತಾ ಇದ್ದ. ಒಳಗೆ ಪ್ರವೇಶಿಸಲು ಅವನಿಗೆ

ಧೈರ್ಯವಿಲ್ಲ. ಅವನ ಎದೆಯಲ್ಲಿ ಅವಲಕ್ಕಿ ಕುಟ್ಟುತ್ತಾ ಇತ್ತು. ಸ್ವಲ್ಪ ಹೊತ್ತಿನಲ್ಲಿ, ಏನೋ ಕೆಲಸದಲ್ಲಿದ್ದ ಹೆಡ್ಮಾಸ್ಟರರು, ಹಿಂದೆ ನೋಡಿದರು. ಬಾಗಿಲ ಸಂದಿಯಲ್ಲಿ 'ತಮ್ಮು'! 'ಹೀಗೆ ಬಾ!' ಎಂದರು.

ಮೋಡ ತುಂಬಿದ ಆಕಾಶದಿಂದ ಮಳೆ ಸುರಿಯುವಂತೆ, ಅಕೃತ್ಯದ ಪಶ್ಚಾತ್ತಾಪದಿಂದ ತುಂಬಿದ ತಮ್ಮುವಿನ ಹೃದಯವೂ ಕಣ್ಣೀರು ಸುರಿಸ ತೊಡಗಿತು. ಅಂದೊಮ್ಮೆ ತಮ್ಮು ಇದೇ ಕೊಟ್ಟಡಿಗೆ ಪ್ರವೇಶಿಸಿದುದು ಅವನ ಸ್ಮರಣೆಗೆ ಬಂತು. ಅಂದವನು ಆಟದಲ್ಲಿ ಗೆದ್ದ ಮೆಡಲನ್ನು ತೆಗೆದುಕೊಂಡು ಎಷ್ಟು ಧೈರ್ಯದಿಂದ, ಎಷ್ಟು ಆನಂದದಿಂದ ಇದರೊಳಗೆ ಕಾಲಿಟ್ಟಿದ್ದ! ಅಂದವನು ಹೆಡ್ಮಾಸ್ಟರರ ಮೆಚ್ಚಿಗೆಯುನ್ನು ಪಡೆದು, ನಗುನಗುತ್ತ ಎಷ್ಟು ಉಲ್ಲಾಸದಿಂದ ಇಲ್ಲಿಂದ ಹೊರಹೊರಟಿದ್ದ! 'ಅಂದು ಸಂತೋಷದ ಆ ದಿನವೂ ಒಂದಿತ್ತು. ಇಂದು ಸಂತಾಪದ ಈ ದಿನವೂ ಒಂದು ಬಂತೇ?' ಎಂದು ಅವನು ಗಟ್ಟಿಯಾಗಿ ಅತ್ತ. ಹೊಡೆದವರಂತೆ, ಮಗುವಿನ ಹಾಗೆ, ಬಿಕ್ಕಿ ಬಿಕ್ಕಿ ಅತ್ತುಬಿಟ್ಟ.

ಹೆಡ್ಮಾಸ್ಟರರು ಇಷ್ಟರಿಂದಲೇ ತಮ್ಮುವಿನ ನಿಜವಾದ ನೆಲೆಯನ್ನು ಕಂಡುಹಿಡಿದರು. 'ಇವನು ತಾನಾಗಿ ತಪ್ಪು ಮಾರ್ಗದಲ್ಲಿ ಕಾಲಿಟ್ಟವನಲ್ಲ; ಇವನನ್ನು ಸುಲಭವಾಗಿ ತಿದ್ದಬಹುದು' ಎಂದು ಅವರು ನಿಶ್ಚಯಮಾಡಿದರು. ಅವರಿಗೆ ಬಿರುಸಾದ ಮಾತುಗಳನ್ನಾಡಲು ಬಾಯಿ ಬರಲಿಲ್ಲ. ಹೇಳಿದರು:– 'ಆದುದಾಯಿತು. ಇನ್ನು ಗೋಳಾಡಿ ಫಲವಿಲ್ಲ ಮುಂದಾದರೂ ಹೀಗೆ ಮಂದಮತಿಯಾಗದೆ ಸರಿಯಾದ ದಾರಿಯಲ್ಲಿ ನಡೆ. ನಿನ್ನೆ ನಿನಗೆ ಪೆಟ್ಟಾಗಲಿಲ್ಲ. ಅದೇ ದೊಡ್ಡ ಭಾಗ್ಯ.'

ಬೆಟ್ಟದಂತೆ ಬಂದುದು ಮಂಜಿನಂತೆ ತೇಲಿಹೋದುದೇನೋ ನಿಜ. ಆದರೆ, ತಮ್ಮು ಮಾತ್ರ ಅರ್ಧ ಜೀವವಾಗಿ ಹೋದ. ಅವನಿಗೆ ಗಾಯದ ಮೇಲೆ ಸೆರೆ ಉಪ್ಪನ್ನು ಸುರಿದ ಹಾಗಾಯಿತು. ಉಪಾಧ್ಯಾಯರಿಬ್ಬರೂ ಆ ಸಂದರ್ಭದಲ್ಲಿ ಮೆತ್ತಗಾದ ಮಾತುಗಳನ್ನೇ ಪ್ರೀತಿಯಿಂದ ಆಡಿದರೂ, ಅದು ಅವನ ಮನಸ್ಸಿಗೆ ಚೆನ್ನಾಗಿ ನಾಟಿತು. ಜತೆಗೆ ತನ್ನ ಅಕೃತ್ಯದ,

ಅದಕ್ಕೆ ಮೂಲಕಾರಣವಾದ ಆ ಸಹವಾಸದ ಪಶ್ಚಾತ್ತಾಪವೂ ಅವನ ಬೆನ್ನು ಬಿಡದೆ ಸುಡುತ್ತಿತ್ತು. ಅಯ್ಯೋ! ಪಾಪ! ಅಂಥಾ ತಮ್ಮುಗೆ ಇಂಥಾದ್ದೂ, ಒಂದು ಜೀವನವೇ?

---

## ಇಪ್ಪತ್ತೊಂದನೆಯ ಅಧ್ಯಾಯ.

### ತಂದೆಯ ಕಾಗದ.

ಆ ದಿನದಿಂದ ತಮ್ಮು ಎಲ್ಲವನ್ನೂ ಬಿಟ್ಟ! ಕಾಫಿ ಬಿಟ್ಟ. ಆಟಕ್ಕೆ ಹೋಗುವುದು ಬಿಟ್ಟ. ತಿರುಗಾಟ ಬಿಟ್ಟ. ರಾತ್ರಿ ಊಟ ಮಾಡಿ ಪಟ್ಟುಹಿಡಿದು ಓದುವುದಕ್ಕೆ ಕುಳಿತ! ಚೆನ್ನಾಗಿ ಓದಿದ. 'ಇನ್ನು ಮುಂದೆ ಕಾಫಿಯ ತಂಟೆಗೆ ಹೋಗುವುದಿಲ್ಲ; ಸಿಗರೆಟ್ ಸೇದುವುದಿಲ್ಲ; ಸೈಕಲ್ ಇಲ್ಲ; ಅದಿಲ್ಲ; ಇದಿಲ್ಲ. ದುಡ್ಡು ಹಾಳುಮಾಡುವುದಿಲ್ಲ' ಎಂದು ಶಪಥ ಹಾಕಿಕೊಂಡ. ಓದಿದ. ಓದು ಒಂದು ವಾರ ಹಾಗೆಯೇ ಸಾಗಿತು. ಸುದ್ದಿ ಇಲ್ಲ.

ಈಗ ಅವನು ಶ್ಯಾಮಭಟ್ಟರ ಹೋಟಲಿನಲ್ಲಿ ಇಲ್ಲ. ಉಂಡವರು ಅನೇಕರು ದುಡ್ಡು ಕೊಡದೆ ಭಟ್ಟರಿಗೆ ನಾಮ ತೋರಿಸಿ ಜಾರಿದುದರಿಂದ ಭಟ್ಟರೂ ಹೇಳದೆ, ಕೇಳದೆ 'ಹೋಟಲ್' 'ಬಂದು' ಮಾಡಿ ಎಲ್ಲಿಗೋ ಓಡಿಬಿಟ್ಟಿದ್ದರು. ಆ ಕಾರಣ ತಮ್ಮು ಇನ್ನೊಂದು ಹೋಟಲಲ್ಲಿ ಇದ್ದನು. ಅಲ್ಲಿ ಅವನೇನು ಮಾಡುತ್ತಾನೆಂದು ಹೋಟಲಿನ 'ಧನಿ' ವಿಚಾರಿಸುತ್ತಿರಲಿಲ್ಲ. ತಿಂಗಳಾದ ಕೂಡಲೇ ದುಡ್ಡು ಊರಿಂದ ಬಂತೇ? ಎಂದು ಇಷ್ಟು ಮಾತ್ರ ವಿಚಾರಿಸುತ್ತಿದ್ದ. ತಮ್ಮು ಈ ತಿಂಗಳಲ್ಲಿ ಬಂದ ಹಣವನ್ನು ಅವನಿಗೆ ಕೊಡದೆ, ಹಿಂದಿನ ದುಂದುಗಾರಿಕೆಯ ಹಳೇ 'ಬಾಕಿ'ಗಾಗಿ ಕಾಫಿ ಹೋಟಲಿಗೂ, ಜವುಳಿ ಅಂಗಡಿಗೂ ಹಂಚಿಕೊಟ್ಟು 'ಮನಿಯಾರ್ಡರ್' ಬಂದಿಲ್ಲವೆಂದು ಹೋಟಲಿನವನಿಗೆ ಯತ್ನವಿಲ್ಲದೆ ಹೇಳಿದ್ದ. ಅವನು ಕೊಂಚ ದಿವಸ ಕಾದು 'ಮನೆಗೆ ತಿಳಿಸಲೇ' ಎಂದು 'ತಗಾದೆ' ಮಾಡಿದ್ದರ ಮೇಲೆ,

ತಮ್ಮ ನಿರುಪಾಯನಾಗಿ ಏನೋ ಸುಳ್ಳು ಕಾರಣಗಳನ್ನು ಕಾಣಿಸಿ, ಮನೆಗೆ ಹಣ ಕಳುಹಿಸಲು ಬರೆದಿದ್ದ. ಹಣ ಬಂತು. ಅದರೊಡನೆ ಒಂದು ಕಾಗದವೂ ಇತ್ತು, ಹೀಗೆ,—

ಚಿರಂಜೀವಿಗೆ ಆಶೀರ್ವಾದ. ಸಾಂಪ್ರತ:—

ನಿನ್ನ ಕಾಗದ ಬಂದು ಮುಟ್ಟಿತು. ನಿನಗೆ ಈ ವರ್ಷ ಇಷ್ಟು ಖರ್ಚು ಏಕೆಂದು ನನಗೆ ತಿಳಿಯುವುದಿಲ್ಲ. ನಾನು ನಿನ್ನ ವಿದ್ಯಾಭ್ಯಾಸದ ಸಂಬಂಧ ಆಗಲೇ ಆಸ್ತಿಯನ್ನು ಈಡು ಮಾಡಿಕೊಟ್ಟ ಸಂಗತಿ ನಿನಗೆ ಗೊತ್ತೇ ಉಂಟು. ಹಾಗಿರುತ್ತ ನೀನು ಸಾಧ್ಯವಿರುವಷ್ಟು ಮಟ್ಟಿಗೆ ಖರ್ಚು ಕಡಿಮೆ ಮಾಡುವುದನ್ನು ಬಿಟ್ಟು, ನನ್ನನ್ನು ಇನ್ನೂ, ಇನ್ನೂ ಏಕೆ ಸಾಲದ ಹೊಂಡಕ್ಕೆ ಎಳೆಯುವೆ ಎಂದು ತಿಳಿಯುವುದಿಲ್ಲ. ನಿಮ್ಮ ಹೆಡ್ಮಾಸ್ಟರರೊಡನೆ ನಿನ್ನ ಖರ್ಚುವೆಚ್ಚದ ಕುರಿತು ತಿಳಿಸಿದಾಗ್ಗೆ ಅವರೂ ಏಕಿಷ್ಟು ಖರ್ಚು ಎಂದು ಆಶ್ಚರ್ಯಪಟ್ಟರು. ಅಷ್ಟೇ ಅಲ್ಲ; 'ತಮ್ಮ ಎಲ್ಲಿಯಾದರೂ, ಕೆಟ್ಟ ಸಹವಾಸದಿಂದ ದುಂದುಗಾರಿಕೆಯನ್ನೂ, ದುರಭ್ಯಾಸಗಳನ್ನೂ ಕಲಿತಿದ್ದಾನೋ' ಎಂದು ಸಂಶಯಪಟ್ಟರು. ಹಾಗೇನಾದರೂ ನೀನು ಹುಡುಗಾಟ ಮಾಡುತ್ತಿದ್ದೀ, ಮನೆಹಾಳುತನಕ್ಕೆ ಮನಸ್ಸು ಕೊಟ್ಟಿದ್ದೀ ಎಂದು ತಿಳಿದುಬಂದರೆ, ಕೂಡಲೇ ನಾನು ನಿನ್ನನ್ನು ಶಾಲೆ ಬಿಡಿಸಿ ಮನೆಗೆ ಕರೆದುಕೊಂಡು ಬರುವುದು ನಿಜವೆಂದು ಖಂಡಿತ ತಿಳಿ. ನಿನಗೆ ಬೇಕಾದಂತೆ ತಿಂಗಳಿಗೆ 2—3 ಸಲ ಮನಿಯಾರ್ಡರ್ ಇನ್ನು ಕಳುಹಿಸಲಾರೆ. ನನ್ನಲ್ಲಿ ಶಕ್ತಿ ಇಲ್ಲ. ಈಗಾಗಲೇ ಪದ್ಮನಿಗೆ ಮದುವೆಯ ವಯಸ್ಸಾಗಿದೆ. ಮೊನ್ನೆಗೆ 8 ವರ್ಷ ಹಿಡಿದಿದೆ. ನಿನ್ನ ವಿದ್ಯಾಭ್ಯಾಸದ ದೆಸೆಯಿಂದ, ದುಡ್ಡು ಸಾಲದೆ, ಸಾಲ ಹುಟ್ಟದೆ ಮದುವೆಯ ಯೋಚನೆ ನಿಂತಿದೆ. ನೀನು ಪಾಸಾಗದೆ, ಸಂಪಾದಿಸಲು ತೊಡಗದೆ, ಅವಳ ಮದುವೆಗೆ ಯತ್ನವಿಲ್ಲ. ಆ ಕಾರಣದಿಂದ ಕಷ್ಟಪಟ್ಟು ಓದಿ ಪಾಸಾಗಿ, ನಮ್ಮ ಸಾಲ ತೀರುವಂತೆಯೂ, ಪದ್ಮನ ಮದುವೆಗೆ ಮಾರ್ಗವಾಗುವಂತೆಯೂ ಪ್ರಯತ್ನಪಡುವ ಭಾರ ನಿನ್ನದು. ಓದಿನಲ್ಲಿ ಜಾಗ್ರತೆ ಇಡು; ಖರ್ಚಿನಲ್ಲಿ ಎಚ್ಚರಿಕೆಯಿಂದಿರು.—ಮನೆಯಲ್ಲಿ ಎಲ್ಲರೂ ಕ್ಷೇಮ. ಆಶೀರ್ವಾದ'.

ಕಾಗದವು ಕೈಸೇರಿದಂದಿನಿಂದ, ತಮ್ಮುವಿಗೆ ಊಟತಿಂಡಿಗಳಲ್ಲಿ ಆಸಕ್ತಿ ತಪ್ಪಿತು. ರುಚಿ ಕೆಟ್ಟಿತು. ಅವನ ಮನಸ್ಸು ಕೊರಗತೊಡಗಿತು. ಅವನಿಗೆ ಉಂಡನ್ನ ಮೈಗೆ ಹಿಡಿಯದಾಯಿತು. ದೇಹವು ಸೊರಗಿ ಬಡ ವಾಯಿತು. ಅವನಿಗೀಗ ಇದೇ ಒಂದು ದೊಡ್ಡ ಚಿಂತೆ:—'ಖರ್ಚು ಕಡಿಮೆ ಮಾಡಬಲ್ಲೆ; ಕಷ್ಟಪಟ್ಟು ಓದಬಲ್ಲೆ; ನನ್ನಲ್ಲಿ ಹೆತ್ತವರಿಗೂ, ಉಪಾಧ್ಯಾಯರಿಗೂ ಇಂದು ಉಂಟಾಗಿರುವ ಅತೃಪ್ತಿಯನ್ನು ಹೋಗ ಲಾಡಿಸಿ,—ಮುಂದಾದರೂ ಅವರನ್ನು ಸಂತೋಷಗೊಳಿಸಬಲ್ಲೆ. ಆದರೆ ಗಂಟುಬಿದ್ದ ಈ ಹಾಳು ಸಹವಾಸದಿಂದ ನಿಷ್ಠುರವಿಲ್ಲದೆ, ಹೇಗೆ ತಪ್ಪಲಿ? ಅವರೇನೋ ಹಣಗಾರರ ಮಕ್ಕಳು. ಓದಿ ಸಂಪಾದಿಸಬೇಕಾದುದೇನೂ ಇಲ್ಲ. ಇದ್ದುದನ್ನು ಕುಳಿತು ತಿಂದರೆ ಸಾಕು. ನನಗಾದರೆ ಹಾಗಲ್ಲ. ಎಲ್ಲವೂ ಈ ವಿದ್ಯೆಯಿಂದಲೇ ಆಗಬೇಕು. ಸಂಸಾರದ ಹೊಟ್ಟೆಹೊರೆಯಬೇಕು. ಬಟ್ಟೆ ಬರೆಗಳಾಗಬೇಕು. ಸಾಲ ತೀರಿಸಬೇಕು. ಶುಭಶೋಭನಗಳನ್ನು ಜರುಗಿಸಬೇಕು. ಇನ್ನು ಈ ಸಹವಾಸವಲ್ಲ ನನಗೆ. ಖಂಡಿತ. ಇಷ್ಟರ ತನಕ ನಾನು 'ಕಡಲೆಯೊಟ್ಟಿಗಿನ ಎಳ್ಳಿ'ನಂತೆ ಕರಟ ಬೂದಿಯಾದುದೇ ಸಾಕು. ಆದರೆ ಅವರ ಹಿಡಿತದಿಂದ ತಪ್ಪಲೇನು ಉಪಾಯ?' ಎಂದು. ಎಷ್ಟು ಯೋಚಿಸಿದರೂ ಇದು ಬಗೆ ಹರಿಯಲಿಲ್ಲ ತಮ್ಮುಗೆ ಸೋತ.

ತಮ್ಮುವಿನ ಈ ವಿಧವಾದ ಬದಲಾವಣೆಯು ಗುಟ್ಟು ಅವನ ಮಿತ್ರರಿಗೂ ಕ್ರಮೇಣ ತಿಳಿಯದಿರಲಿಲ್ಲ ಮೊದಮೊದಲು ಅವರು ಅವನ ಮಾತುಗಳನ್ನು ನಿಜವೆಂದೇ ನಂಬಿದ್ದರು. 'ಕಾಫಿ ಹೋಟಲಿಗೆ ಏಕೆ ಬರುವುದಿಲ್ಲ?' 'ಮೈಚೆನ್ನಾಗಿಲ್ಲ.' 'ಚಂಡಿನ ಆಟಕ್ಕೆ ಬರುವುದಿಲ್ಲ ಏಕೆ?' 'ಕಾಲುನೋವು'. 'ನೆಕ್ ಟ್ಯಾ-ಕಾಲರು ಏಕೆ ಹಾಕುವುದಿಲ್ಲ?' 'ಡೋಬಿಗೆ ಹೋಗಿದೆ'—ಎಂಬಿವೇ ಆ ಮಾತುಕತೆಗಳು. ಆದರೆ ಅನಂತರ ಅವರಿಗೆ ಸಂಶಯ ಹುಟ್ಟಿತು ತಮ್ಮು ಏನೋ ರಕ್ಕು ಮಾಡುತ್ತಾನೆಂದು ತಿಳಿಯಿತು. ಅವರಿಬ್ಬರೂ,—ರಾಮುಸ್ವಾಮಿ, ರಾಮುರಾಯ,—ಸೇರಿ ಆಲೋ ಚಿಸಿದರು. 'ಬಲೆಗೆ ಸಿಕ್ಕಿದ ಬೇಟೆ ಕೈತಪ್ಪುವ ಹಾಗಿದೆ; ಹೇಗಾದರೂ

ದಕ್ಕಿಸಿಕೊಳ್ಳಬೇಕು' ಎಂದು. ಅವರು ಒಡನೆಯೇ ಒಂದು 'ಮಸಲತ್ತು' ಮಾಡಿದರು. ಚಕ್ರಪಾಣಿಯ ಮೇಲೆ ತಮ್ಮುವಿಗೆ ರಚ್ಚಿದೆ ಎಂದು ಅವನ ಬಾಯಿಯಿಂದಲೇ ಇವರು ಕೇಳಿ ತಿಳಿದಿದ್ದರು. ಈಗ ಆ ದ್ವೇಷಕ್ಕೆ ಧೂಪ ಹಾಕಿ, ಇವನನ್ನು ಕುಣಿಸಬೇಕೆಂದು ಅವರು ನಿರ್ಧರಿಸಿದರು.

---

## ಇಪ್ಪತ್ತೆರಡನೆಯ ಅಧ್ಯಾಯ.

## ನೊಂದಿದ ಉರಿ ಪುನಃ ಎದ್ದಿತು.

ಒಂದು ದಿನ ಅವರು ತಮ್ಮುವಿನ ಬಳಿಗೆ ಬಂದರು. 'ನಿನ್ನ ಗುಟ್ಟೆಲ್ಲ ಗೊತ್ತಾಯಿತು. ನಿನಗೆ ಈಗ ನಮ್ಮ ಜತೆ ಬೇಡವಾಗಿದೆ. ಈಗ ನಾವು ನಿನ್ನ ಭಾಗಕ್ಕೆ 'ಪೋಲಿಗಳು; ತಲೆ ಮಾಸಿದವರು; ದುರುಳರು' ಎಂದು ಕರುಳು ಕತ್ತರಿಸುವಂತೆ ಮಾತಾಡಿದರು ನಂಜು ಕಾರಿದರು.

ತಮ್ಮುವಿನ ಮುಖ ಪೆಚ್ಚಾಗಾಯಿತು.

**ರಾಮುಸ್ವಾಮಿ:**—'ಕಟ್ಟವರು ನಾವು. ಒಳ್ಳೆಯವನು ನೀನು. ನಿನಗಾಗಿ ನಾವು ಹೂಡಿದುದೆಲ್ಲ ವ್ಯರ್ಥ. ಎಣ್ಣೆ ಬರುವಾಗ ಗಾಣ ಮುರಿಯಿತು!'

**ತಮ್ಮು:**—'ನಿನ್ನ ಈ ಮಾತುಗಳ ಅರ್ಥ ನನಗಾಗುವುದಿಲ್ಲ; ಯಾವ ಎಣ್ಣೆ? ಎಂಥಾ ಗಾಣ?'

ರಾ:—'ನಿನಗಾಗದವನೆಂದು ಚಕ್ರಪಾಣಿಯ ಮೇಲೆ ನಾವು ಕಣ್ಣಿಟ್ಟಿದ್ದರೆ, ನೀನು ಸಂಪನ್ನ ಮಧ್ಯದಲ್ಲಿ ನುಣುಚಿಕೊಳ್ಳುವುದೇ?

ತ:—'ಅವನನ್ನು ನೀವೇನು ಮಾಡಬೇಕೆಂದಿದ್ದಿರಿ?'

ರಾ:—'ತಲೆಯೊಡೆಯಬೇಕೆಂದು; ಮಗ್ಗಲು ಮುರಿಯಬೇಕೆಂದು.'

ತ:—'ತಲೆಯೊಡೆಯುವುದೇ? ರಾಮ! ರಾಮ! ಯಾವ ತಪ್ಪಿಗೆ? ಅವನು ನನಗೇನೂ ತಪ್ಪು ಮಾಡಿಲ್ಲವಲ್ಲ!'

ರಾ:—'ಅಯ್ಯೋ! ಹುಚ್ಚ! ಅವನನ್ನು ಹಾಗೆಯೇ ಎಲ್ಲಿಯಾದರೂ ಬಿಡುವುದುಂಟೇ? ಅವನಿಗೆ ಈಗ ತಲೆಗೇರಿ ಹೋಗಿದೆ;—ಅಹಂಕಾರ. ಅವನೀಚೆಗೆ ನೆಲವನ್ನು ನೋಡಿ ನಡೆಯುವುದೇ ಇಲ್ಲ, ಕಣ್ಣು ಮೇಲಾಗಿದೆ. 'ನೀವು ಮೂವರೂ ಒಂದು ಪಾಳ್ಯ. ಒಂದು ಪಾಳ್ಯವಾಗಿ ನನ್ನನ್ನು ಏನು ಮಾಡುತ್ತಿರೋ ಮಾಡಿ. ನೋಡುತ್ತೇನೆ' ಎಂದು ನಮ್ಮ ಹಿಂದುಗಡೆಯಲ್ಲಿ ಬಡಾಯಿ ಕೊಚ್ಚುತ್ತಾ ಇದ್ದಾನಂತೆ. ಹಾಗಾದರೆ, ಅವನೇ ಗಂಡಸು ಮಗ; ಮೊಸೆ ಹೊತ್ತವ; ಅವನದೇ ಉಪ್ಪು, ಹುಳಿ ತಿನ್ನುವ ಶರೀರ. ನಮ್ಮದಲ್ಲ. ಹಾಗಲ್ಲವೇ, ಅದರ ಅರ್ಥ?'

ತಮ್ಮುವಿನ ಕಿವಿ ಸ್ವಲ್ಪ ನೆಟ್ಟಗಾಯ್ತು. ಆದರೂ ಹೇಳಿದ:—'ಚಿಃ! ಚಕ್ರಪಾಣಿ ಹಾಗೆ ಹೇಳಲಾರ ಅವನು ಒಳ್ಳೆಯ ಹುಡುಗ. ಶಾಂತ ಗುಣದವ. ಅವನು ಯಾರೊಡನೆಯೂ ಹೆಚ್ಚಿಗೆ ಮಾತಿಗೇ ಹೋಗುವುದಿಲ್ಲವಲ್ಲ!'

ರಾ:—'ಹೋಗುವುದಿಲ್ಲ? ನೀನೆಲ್ಲಿ ಕಂಡೆ? 'ಮಿಣ್ಣಗಿದ್ದವರ ಬಣ್ಣವೇ ಬೇರೆ'. ನಿನಗೆ ಮಾತ್ರ ಬೆಳ್ಳಗಿರುವುದೆಲ್ಲ ಹಾಲೇ; ಹೊಳೆಯುವುದೆಲ್ಲ ಬಂಗಾರವೇ. ಚೆನ್ನಾಯಿತು; ಬಿಡಪ್ಪ!—ನಿನಗೆ ಗೊತ್ತಿಲ್ಲ; ಅವನು, ಹುಲಿ; ಮುಖ ಮಾತ್ರ ಆಕಳಿನದು! ನಿನ್ನೆಯ ದಿವಸ, ಇದೇ ನಮ್ಮ ರಾಮರಾಯನ ಇದಿರಲ್ಲಿ ಏನು ಬೊಗಳಿದ, ಕೇಳು! 'ತಮ್ಮು ಬುದ್ಧಿವಂತ; ಆದರೂ ಅವನು 'ಇನಸ್ಪೆಕ್ಷನ್'ನಲ್ಲಿ ಹೇಳದ ಉತ್ತರಗಳನ್ನು ನಾನು ಹೇಳಬೇಕಾಯಿತು.' ಎಂದು ಮರ್ಮಕ್ಕೆ ತಗಲುವ ಹಾಗೆ ಹಂಗಿಸಿದ! ನಿನ್ನ ಶತ್ರುಗಳಾದರೂ ಇಂಥಾ ಮಾತು ಕೇಳಿ ಸಹಿಸಿಯಾರೇನಯ್ಯ? ಅವನ ತಲೆ ಚೂರು ಮಾಡಿ ಬಿಸಾಡರೇ?'

ತಮ್ಮುವಿನ ಕಣ್ಣು ದೊಡ್ಡದಾಯಿತು. ಮುಂದಿನ ನಾಟಕಕ್ಕೆ ಇದೇ ನಾಂದಿಯಾಗಿ ಪರಿಣಮಿಸಿತು.

ರಾಮರಾಯ:—'ನಿನಗೇ ಬೇಡದೆ ಇದ್ದರೆ, ನಮಗೇನು ಬೇಕು, ತಮ್ಮೂ? 'ತಲೆ ತಲೆ ಹಚ್ಚಿಹಾಕಿದರು' ಎಂಬ ದೂರು ನಮಗೇಕೆ ಕೂತಲ್ಲಿ?

ಎಲೋ, ರಾಮುಸ್ವಾಮಿ! ನಿನಗೆ ಬೇರೆ ಕೆಲಸವಿಲ್ಲ. ಅವರವರು ಒಳ್ಳೇದಾಗಿರುವ ಹಾಗಿದ್ದರೆ ಇದ್ದುಕೊಳ್ಳಲಿ; ನಾವು ಪೋಲಿಗಳು. ದೂರವಿರುವ. ಅವರ ಸ್ನೇಹಕ್ಕೆ ನಮ್ಮಿಂದ ಯಾತಕ್ಕೆ ಅಡ್ಡಿ?

ಇದು 'ಕುಹಕಬುದ್ಧಿಯ ಕೃತಕ'ವೆಂದು ತಮ್ಮುವಿಗೆ ಸುತರಾಂ ತಿಳಿಯಲಿಲ್ಲ! ಪಾಪ, ಅವನು ನಿಜವೆಂದೇ ನಂಬಿದ,—ಚಕ್ರಪಾಣಿ ಹೀಗೆ ಆಡಿದುದೂ ನಿಜ; ಇವರು ತನ್ನೆದುರಲ್ಲಿ ಹೇಳಿದುದೂ ನಿಜ ಎಂದು. ಈಗ ಅವನು ಹಗೆಗಾರ, ಇವರು ಗೆಳೆಯರು! ನೋಡಿ! ಎಷ್ಟು ಬೇಗ ತಮ್ಮು ತಿರುಗಿಹೋದ! ಹೇಗಿದ್ದವನು ಹೇಗಾದ! ನೋಡುತ್ತಿದ್ದಂತೆ ತಮ್ಮುವಿನ ಮುಖ ಕೆಂಪೇರಿತು. ಮೈಯ ರೋಮ ನೆಟ್ಟಗಾಯಿತು. ಮನಸ್ಸಿನಲ್ಲಿ ರೋಷವು ಉಕ್ಕಿ ಬಂತು. ತಮ್ಮು ಆವೇಶದಿಂದ,—'ಇನ್ನವನ ಹೆಸರೆತ್ತಬೇಡಿ. ನಾನೂ ಇದ್ದೇನೆ ನಿಮ್ಮ ಜತೆಗೆ. ಏನು ಬೇಕೋ ಅದನ್ನು ಮಾಡಿ. ಬಡ್ಡಿಯ ಸಹಿತ ಅವನದನ್ನು ಅವನಿಗೆ ಹಿಂದಿರುಗಿಸಿ. ಈ ಜನ್ಮದಲ್ಲಿ ಇನ್ನು ನಮ್ಮ ಗೋಜಿಗೆ ಬರಕೂಡದು;—ಹಾಗೊಮ್ಮೆ ಅವನಿಗೆ ಚೆನ್ನಾಗಿ ಬುದ್ಧಿಕಲಿಸಿ ಬಿಡಿ. ಅದರಲ್ಲಿ ಅವನ ತಲೆ ಹೋದರೂ ಸರಿಯೇ; ನಮ್ಮ ತಲೆ ಹೋದರೂ ಸರಿಯೇ. ಬಂದುದು ಬರಲಿ; ನೋಡಿಕೊಳ್ಳುವ!' ಎಂದ.

**ರಾಮುಸ್ವಾಮಿ:**—'ಆಹಾಹಾ! ನಿನ್ನನ್ನು ನಂಬಿದರೆ ತಲೆಗೆ ತಂಬಿಗೆಯೇ;—'ಯಾವ ತಪ್ಪಿಗೆ?' ಎಂದು ನೀನೇ ಅಲ್ಲವೇ, ಕೇಳಿದೆ ಆಗ? ಇನ್ನು ಈ ಸಲ ನಂಬಿದರೆ, ದೇವರೇ ಗತಿ!'

**ತಮ್ಮು:**—'ಇದೋ! ನಂಬು; ಖಂಡಿತ. ಕೈ ಮೇಲೆ ಕೈ ಹೊಡೆದು ಹೇಳುತ್ತೇನೆ. ಆದರೆ ಅವನ ತಲೆಯೊಡೆದು, ಅವನ ಎಲುಬು ಪುಡಿ ಮಾಡಿಯೂ ನಾವು ಸುರಕ್ಷಿತವಾಗಿರುವ ಬಗೆ ಹೇಗೆ, ಹೇಳು!

**ರಾಮರಾಯ:**—'ಹೇಗೆ ಅಂದರೆ ಹೀಗೆ ಅದು;—ಬರುವ ವಾರ ಒಂದು 'ಫೂಟ್‌ಬೋಲ್ ಮೇಚ್' ಏರ್ಪಾಡಾಗಿದೆ. ಅದಕ್ಕೆ ನಮ್ಮ ಶಾಲೆಯದೇ ಎರಡು ಪಂಗಡ; ಎದುರು ಪಂಗಡದಲ್ಲಿ ಚಕ್ರಪಾಣಿ ಇದ್ದಾನೆ.

ಸಮಯ ನೋಡಿ ಅವನ ಮೇಲೆ ಬಿದ್ದರೆ ಆಯಿತು. ಚೆಂಡನ್ನು ತುಳಿಯುವ ಬದಲು ಅವನ ಕಾಲು ತುಳಿದರೆ ಆಯಿತು. 'ಅಚಾತುರ್ಯ' ಎಂದಾಗುತ್ತದೆ; ಅವನ ಸೊಕ್ಕೂ ಮುರಿಯುತ್ತದೆ.

ಪೂರ್ವಾಪರ ವಿಚಾರವಿಲ್ಲದೆ ತಮ್ಮು ಈ ಕೆಟ್ಟ ಆಲೋಚನೆಗೆ ಆಹುತಿಯಾದ. ಯಾವ ಪಾಪವನ್ನೂ ಕಾಣದ ಚಕ್ರಪಾಣಿಗೆ ಅನ್ಯಾಯವಾಗಿ ಕೇಡು ಬಗೆದ. ಇದೆಲ್ಲವೂ ಕುಹಕಿಗಳ ಮಾತನ್ನು ಕುರುಡನಂತೆ ನಂಬಿದುದರ ಪರಿಣಾಮವಲ್ಲವೇ? ನಿಷ್ಕಾರಣವಾದ ಕೋಪಕ್ಕೆ ಮನಸ್ಸು ಕೊಟ್ಟ ಪ್ರತಿಫಲವಲ್ಲವೇ?

'ಫೂಟ್ ಬಾಲ್ ಮೇಚ್' ಎಂದು ನಿಶ್ಚಯಮಾಡಿದ್ದ ಆ ದಿನ ಬಂತು. ಹೊತ್ತಿಗೆ ಸರಿಯಾಗಿ ಇತ್ತಂಡದ ಆಟಗಾರರೂ ಬಂದು ಅವರವರ ಸ್ಥಳದಲ್ಲಿ ನಿಂತರು. ನೋಡುವುದಕ್ಕೆ ಕೆಲವು ಮಂದಿ ಪ್ರೇಕ್ಷಕರೂ ಇದ್ದರು. ಅವರಲ್ಲಿ ವಿದ್ಯಾರ್ಥಿಗಳೇ ಹೆಚ್ಚು. ಹೊತ್ತಿಗೆ ಸರಿಯಾಗಿ ಆಟವು ಆರಂಭವಾಯಿತು. ತಮ್ಮು ಗೋಲಿನ ಮುಂಭಾಗದಲ್ಲಿ ಕೆಲವು ಗಜ ದೂರದಲ್ಲಿ ನಿಂತುಕೊಂಡು, ಚೆಂಡು ಬರುವುದನ್ನೇ ಕಾಯುತ್ತಿದ್ದ. ಸ್ವಲ್ಪ ಹೊತ್ತಿನ ವರೆಗೆ ಚೆಂಡು ಅವನು ಇದ್ದಲ್ಲಿಗೆ ಬರಲಿಲ್ಲ. ತಮ್ಮುವಿನ ಮುಂಭಾಗದಲ್ಲಿ ಆಡುತ್ತಿದ್ದ ಅವನ 'ಪಾರ್ಟಿ'ಯವರು, ಚೆಂಡು ತಮ್ಮುವಿನ ಕಡೆಗೆ ಬಂದಾಗಲೆಲ್ಲ, ಅದನ್ನು ಹಿಂದಕ್ಕೆ ಅಟ್ಟಿ, ಎದುರುಕಡೆಯ ಗೋಲಿನ ಕಡೆಗೆ ಅದನ್ನು ಓಡಿಸುತ್ತಿದ್ದರು. ಆ ಕಾರಣ, ಚೆಂಡು ಸ್ವಲ್ಪ ಹೊತ್ತು, ಎದುರು ಕಡೆಯ ಗೋಲಿನ ಕಂಬಗಳ ಸಮೀಪದಲ್ಲಿಯೇ ಸುಳಿದಾಡುತಿತ್ತು. ಇಷ್ಟರಲ್ಲಿ ಹಠಾತ್ತಾಗಿ ಚೆಂಡು ಚಕ್ರಪಾಣಿಯ ಕಾಲಿಗೆ ಸಿಕ್ಕಲು, ಅವನು ಅದನ್ನು ಇತರರ ಕೈಗೆ ಸಿಕ್ಕದಂತೆ, ವೇಗವಾಗಿ ಹೊರಳಿಸುತ್ತ, ತಾನೂ ರಭಸದಿಂದ ಓಡುತ್ತ, ತಮ್ಮು ಇದ್ದ ಕಡೆಗೆ ಬಂದನು. ಆಗ ರಾಮರಾಯ ಒಂದು ದಿಕ್ಕಿನಿಂದಲೂ, ರಾಮಸ್ವಾಮಿ ಇನ್ನೊಂದು ದಿಕ್ಕಿನಿಂದಲೂ ಬಂದು, ಚಕ್ರಪಾಣಿಯ ಕಾಲುಗಳನ್ನು ತುಳಿದರು. ಚಕ್ರಪಾಣಿ ಅಲ್ಲಿಯೇ ಬಿದ್ದ. ಮೈಮರೆತ.

'ಫೂಟ್ ಬಾಲ್ ಕ್ಲಬ್ಬ'ನ್ನು ಸ್ಥಾಪಿಸಿ, ಅದರ ಮೆಂಬರರನ್ನು ತರಬೇತು ಮಾಡುತ್ತಿದ್ದ ಆ ಉಪಾಧ್ಯಾಯರೇ ಈ 'ಮ್ಯಾಚಿನ' ಪಂಚಾಯಿತರು (ರೆಫರಿ). ಅವರು ಚಕ್ರಪಾಣಿ ಬೀಳುವಾಗ ಕೊಂಚ ದೂರದಲ್ಲಿದ್ದರು. ಅವನು ಬಿದ್ದುದನ್ನು ಕಂಡರೋ ಇಲ್ಲವೋ, 'ಏನೋ ಅವಗಡವಾಯಿತೆ'ಂದು ಓಡಿ ಬಂದರು. 'ಸ್ವಲ್ಪ ನೀರು ತನ್ನಿ' ಎಂದು ಕೂಗಿದರು.

ನೀರನ್ನು ಯಾರೋ ಹುಡುಗರು ತಂದರು. ಉಪಾಧ್ಯಾಯರು ಚಕ್ರಪಾಣಿಯ ಮುಖದ ಮೇಲೆ ಒಂದಿಷ್ಟು ನೀರು ಚುಮುಕಿಸಿ, ಸ್ವಲ್ಪ ಗಾಳಿ ಹಾಕಿದರು. ಚಕ್ರಪಾಣಿಗೆ ತಿಳಿವು ಉಂಟಾಯಿತು. ಪರೀಕ್ಷಿಸಲಾಗಿ ಅವನ ಎಡಗಾಲಿನ ಮೊಣಗಂಟಿನ ಹತ್ತಿರ ಪೂರಾ ಪೆಟ್ಟಾಗಿತ್ತು. ಅವನಿಗೆ ಎದ್ದು ನಿಲ್ಲಲು ಆಗುತ್ತಿರಲಿಲ್ಲ. ಎಲುಬು ಎಲ್ಲಿಯಾದರೂ ಮುರಿದಿದೆಯೋ ಎಂಬ ಸಂದೇಹವೂ, ದಿಗಿಲೂ ಉಪಾಧ್ಯಾಯರಿಗೆ ಉಂಟಾಯಿತು. ಚಕ್ರಪಾಣಿಯನ್ನು ಒಡನೆಯೇ ಆಸ್ಪತ್ರೆಗೆ ಕರೆದುಕೊಂಡು ಹೋದುದಾಯಿತು. ಪರೀಕ್ಷಿಸಿದ್ದಲ್ಲಿ 'ಪೆಟ್ಟು ಮಾತ್ರ; ಎಲುಬು ಮುರಿದಿಲ್ಲ' ಎಂದು ತಿಳಿದು ಉಪಾಧ್ಯಾಯರಿಗೆ ಸಂತೋಷವಾಯಿತು. ಚಕ್ರಪಾಣಿ ಆಸ್ಪತ್ರೆಯಿಂದ ಹಿಂದಿರುಗಲು 5—6 ದಿನಗಳು ಹಿಡಿಯಿತು. ಆ ಸಮಯದಲ್ಲಿ ನಮ್ಮ ಮೂವರು ವಿದ್ಯಾರ್ಥಿಗಳೂ 'ಕರು ತಿಂದು ಕುರುಕ' ನಂತೆ ಮೆತ್ತಗಿದ್ದರು. ಯಾರಿಗೂ ಅವರ ಒಳಗಿನ ಗುಟ್ಟು ಗೊತ್ತಾಗಲಿಲ್ಲ. 'ಫೂಟ್ ಬಾಲ್ ಆಟದ' ತರಬೇತಿಗೆ ಆ ದಿನಗಳಲ್ಲೆಲ್ಲ ಸಂಪೂರ್ಣ ವಿಶ್ರಾಂತಿ.

---

## ಇಪ್ಪತ್ತಮೂರನೆಯ ಅಧ್ಯಾಯ.

## ಹೊಸ್ಟೆಲಿನ ಜೀವನ.

ಶಾಲೆಗೆ ಸಮೀಪವಿರುವ 2 ಮನೆಗಳನ್ನು ಬಾಡಿಗೆಗೆ ತೆಗೆದುಕೊಂಡು, 'ಶಾಲೆಯ ಹೊಸ್ಟೆಲು' ಆರಂಭವಾಯಿತು. ಪರಸ್ಥಳದ ವಿದ್ಯಾರ್ಥಿಗಳಲ್ಲಿ

ಹೆಚ್ಚಿನವರು ಅದರ ಮೆಂಬರರಾದರು. ಮೇಲ್ವಿಚಾರಕಕ್ಕೂ, ವಿದ್ಯಾರ್ಥಿಗಳ ಅಶನವಸನಕ್ಕೂ ತಕ್ಕ ಏರ್ಪಾಡುಗಳನ್ನು ಆಗಲೇ ಮಾಡಿದುದಾಯಿತು. ತಮ್ಮು, ರಾಮರಾಯ, ರಾಮಸ್ವಾಮಿ ಮೊದಲಾದವರೆಲ್ಲರೂ ಹೊಸ್ಟೆಲಿಗೆ ಬಂದು ಸೇರಿಕೊಂಡರು; ಅವರ ಹಿಂದಿನ ಹೋಟಲು, ಬಿಡಾರಗಳನ್ನೆಲ್ಲ ಬಿಟ್ಟುಬಿಟ್ಟರು.

ತಮ್ಮುವಿಗೆ ಹೊಟೆಲಿನ ಜೀವನದಿಂದಲೂ ಹೊಸ್ಟೆಲ್‌ನ ಜೀವನವೇ ವಾಸಿ ಎಂದು ಕೆಲವು ದಿನಗಳ ಅವನ ಅನುಭವದಿಂದ ಕಂಡುಬಂತು. ಮೇಲ್ವಿಚಾರಕ್ಕೆ ಒಬ್ಬರು ಉಪಾಧ್ಯಾಯರಿದ್ದಾರೆ. ಊಟ ತಿಂಡಿಗಳನ್ನು ಸಕಾಲದಲ್ಲಿ ಒದಗಿಸಲು ತಕ್ಕ ಸೇವಕರಿದ್ದಾರೆ. ಓದುವುದಕ್ಕೊಂದು ನಿರ್ಣಯವಾದ ಸಮಯವುಂಟು; ಆ ಸಮಯದಲ್ಲಿ ಹೊರಗಿನ ಒಳಗಿನ ಯಾವ ಗಲಭೆಯೂ ಇಲ್ಲ. ಸುಖವಾಗಿ ಓದಬಹುದು. ಆದರೆ ಒಂದು ತೊಂದರೆ,—ರಾಯರಿಬ್ಬರ ಸಹವಾಸದಿಂದ, ತನ್ನ ಓದು ಸುಸೂತ್ರವಾಗಿ ಸಾಗುವಂತಿಲ್ಲ. ಮೇಲ್ವಿಚಾರಕರು ಬರುವಾಗ, ಅವರ ಕಣ್ಣಿಗೆ ಮಣ್ಣು ಹಾಕಲು, ರಾಯರಿಬ್ಬರೂ ಅವರವರ ನಿಯಮಿತ ಸ್ಥಳಗಳಲ್ಲಿ, ಮೂರು ನಾಲ್ಕು ಪುಸ್ತಕಗಳನ್ನು ಮುಂದಿಟ್ಟುಕೊಂಡು, ಅದೇನು ಓದು! ಅದೆಷ್ಟು ಶ್ರದ್ಧೆ! ಆದರೆ ಅವರ ಬೆನ್ನು ತಿರುಗಿತೋ ಇಲ್ಲವೋ—ಸರಿ; ರಾಯರಿಬ್ಬರೂ ತಮ್ಮುವಿನ ಕೊಟ್ಟಡಿಯಲ್ಲಿ! ಅವರೂ ಓದರು; ತಮ್ಮುವನ್ನೂ ಓದಲು ಬಿಡರು. ಏನಾದರೂ ಹಾಳುಹರಟೆ. ಆ ಮಾಸ್ಟರರು ಹಾಗೆ; ಇವರು ಹೀಗೆ ಎಂದು ಉಪಾಧ್ಯಾಯರ ಮೇಲಿನ ಟೀಕೆ; ಇಲ್ಲದಿದ್ದರೆ 'ಫೂಟ್‌ಬಾಲ್' ಆಟದ ವ್ಯಾಖ್ಯಾನ; ಅಲ್ಲದಿದ್ದರೆ, 'ಡಿಬೇಟಿಂಗ್ ಸೊಸೈಟಿ'ಯಲ್ಲಿ ನಡೆದ ಚರ್ಚೆಯ ಮೇಲೆ ಮತ್ತಷ್ಟು ಚರ್ಚೆ; ಅಥವಾ ಬೊಂಬಯಿ, ಕಲ್ಕತ್ತೆಯ ಕಂಪೆನಿಗಳ 'ಕ್ಯಾಟಲಾಗು'ಗಳನ್ನು ಹಿಡಿದುಕೊಂಡು ಆ 'ವಾಚ್' ತರಿಸುವ, ಈ ಕಾಲರಿಗೆ ಬರೆಯುವ ಎಂಬ ಆಲೋಚನೆ. ತಮ್ಮುವಿಗೆ ಈ ಕಾರಣದಿಂದ, ಒಮ್ಮೊಮ್ಮೆ, ಆ ಹೊಟೆಲೇ ವಾಸಿ ಎಂದು ಅನಿಸುತ್ತಿತ್ತು. ತಂದೆ ಬರೆದ ಕಾಗದದ ನೆನಪಾದಾಗಲೆಲ್ಲ ಮೈ ನಡುಗುತ್ತಿತ್ತು.

ಆದರೆ, ಇವರಿಬ್ಬರ ಹಿಡಿತದಿಂದ ತಪ್ಪಿಸಿಕೊಳ್ಳಲು ಉಪಾಯ ತೋರದೆ, ತಮ್ಮು ಹಾಗೂ, ಹೀಗೂ ಕಾಲಕಳೆಯುತ್ತಿದ್ದ.

ತಮ್ಮುವಿನಲ್ಲಿ ಈಗ ಹೇಗೂ ಒಂದು ಬದಲಾವಣೆಯಾಗಿದೆ. ಉಡುಗೆ ತೊಡಿಗೆಗಳಲ್ಲಿ ಮೊದಲಿನ 'ಶಿಸ್ತು' ಇಲ್ಲ. 'ಕಾಫಿ'ಗೆಂದು ಮೊದಲಿನಂತೆ ನುಗ್ಗುತ್ತಿರಲಿಲ್ಲ. ತಮ್ಮು ತಂದೆಯ ಕಾಗದವನ್ನು ಮಾತು ಮಾತು ಬರುವಾಗ ಗೆಳೆಯರಿಗೆ ತೋರಿಸಿದ್ದ. ಅವರಿಗಿನ್ನು ತಮ್ಮುವನ್ನು ಒತ್ತಾಯಪಡಿಸಲು ಯತ್ನವಿರಲಿಲ್ಲ,—ತಮ್ಮು ಅಷ್ಟರ ಮಟ್ಟಿಗೆ ಬದುಕಿದ.

ಡಿಸೆಂಬರಿನ ರಜೆ ಬಂತು. ತಮ್ಮು ಆ ರಜೆಯ ಒಂದು ಭಾಗ ವನ್ನು ಆ ಹೊಸ್ಟೆಲಿನಲ್ಲಿಯೇ ಕಳೆದ;—ಸ್ವಲ್ಪ ಓದಿ; ಸ್ವಲ್ಪ ಆಡಿ; ಸ್ವಲ್ಪ ತಿರುಗಾಡಿ. ಆ ರಜೆಯಲ್ಲಿ ಅವನ ಗೆಳೆಯರಿಬ್ಬರೂ ಊರಿಗೆ ಹೋಗಿ ದ್ದರು. ತಮ್ಮುವಿಗೆ ಸುಖವಾಗಿ, ಒಬ್ಬರ ಹರಟೆಯಿಲ್ಲದೆ ಓದಲು ಸಮಯ ಸಿಕ್ಕಿದುದೆಂದರೆ ಈಗಲೇ. ತಮ್ಮು ನೋಡುತ್ತಾನೆ—ಪಾಠ ವೆಷ್ಟಾಗಿ ಹೋಗಿದೆ! ದೊಡ್ಡ ಗುಡ್ಡದಂಥಾ ರಾಶಿ! ಈ ರಾಶಿಯನ್ನು ಇನ್ನು ಓದಿ ಮುಗಿಸುವುದು ಯಾವಾಗ? ಪರೀಕ್ಷೆಗೋ--ಇನ್ನು ಗಟ್ಟಿಯಾಗಿ ಎರಡೇ ತಿಂಗಳು. ಆ ಎರಡು ತಿಂಗಳಲ್ಲಿ ಹೊಸ ಪಾಠಗಳೇ ಎಷ್ಟೋ ಮುಗಿಯಲು ಮಿಕ್ಕಿವೆ. 'ಪ್ರತಿನಿತ್ಯವೂ ನಾನು ಕ್ರಮದಂತೆ ಓದಿದ್ದರೆ ನನ ಗಿಷ್ಟು ಭವಣೆಯಾಗುತ್ತಿರಲಿಲ್ಲ; ಹೆಡ್ಡು ಕೆಲಸ ಮಾಡಿದೆ; ನನ್ನ ಬಾಯಿಗೆ ನಾನೇ ಮಣ್ಣು ಹಾಕಿಕೊಂಡೆ' ಎಂದು ತಮ್ಮು ಬಹಳ ಪೇಚಾಡಿದ. 'ಇದು ಸರಕಾರೀ ಪರೀಕ್ಷೆ. ಒಂದು ಮಾರ್ಕು ಕಡಿಮೆಯಾದರೆ ಕೆಟ್ಟಿತು ಕೆಲಸ' ಎಂದು ಅವನು ಕ್ಷಣಕಾಲ ಮೈಮರೆತ. ನಿಜವಾಗಿಯೂ ತಮ್ಮು ಫೈಲಾಗಿ ಹೋದರೆ ಅವನ ಗತಿಯೇನು? ಅವನನ್ನು ನಂಬಿದ ಅವನ ಕುಟುಂಬದ ಸ್ಥಿತಿಯೇನು?

ತಮ್ಮು ಈ ಮಧ್ಯದಲ್ಲಿ ಒಂದು ಬೇಡವಾದ 'ಪೀಕಲಾಟ' ಮಾಡಿ ಕೊಂಡಿದ್ದ. ರಾಮರಾಯ ಊರಿಗೆ ಹೋಗುವಾಗ 'ಈ ಸಲ ನಮ್ಮೂರ ಜಾತ್ರೆಗೆ ನೀನು ಬರಬೇಕು. ರಾಮಸ್ವಾಮಿಯೂ ಬಂದು ಸೇರುತ್ತಾನೆ.

ನಾಲ್ಕು ದಿನ ಅಲ್ಲಿದ್ದು, ಊರು ನೋಡಿಕೊಂಡು, ಜಾತ್ರೆ ನೋಡಿಕೊಂಡು, 'ಮಜಾ' ಮಾಡಿಕೊಂಡು ಬರಬಹುದು. ಆ ಸಮಯಕ್ಕೆ ಸರಿಯಾಗಿ ಮನೆಯಿಂದ ಗಾಡಿ ಕಳುಹಿಸುತ್ತೇನೆ. ಆಳು ಕಳುಹಿಸುತ್ತೇನೆ. ಖಂಡಿತ ಬಾರದೆ ಇರಬೇಡ' ಎಂದಿದ್ದ. ತಮ್ಮು 'ಆ ಸಮಯಕ್ಕೆ ಅಲ್ಲವೆ? ನೋಡಿ ಕೊಳ್ಳುವ!' ಎಂದು ಅರ್ಧ ಸಮ್ಮತಿಯನ್ನು ಸೂಚಿಸಿದ್ದ. ಬಲವಂತ ಮಾಡಿದ್ದರ ಮೇಲೆ 'ಆಗಲಿ' ಎಂದು ಒಪ್ಪಿದ್ದ. ಈ ದಿನ ಆ ಗಾಡಿಯೂ ಬಂದಿದೆ; ಆಳೂ ಬಂದಿದೆ. 'ರಾಮರಾಯ ಇದನ್ನೆಲ್ಲ ಎಲ್ಲಿ ಕಳುಹಿಸು ತ್ತಾನೆ, ನಾನೆಲ್ಲಿಗೆ ಹೋಗುತ್ತೇನೆ' ಎಂಬ ತಮ್ಮುವಿನ ಊಹೆಯೆಲ್ಲ ಸುಳ್ಳಾಗಿದೆ. ಅರ್ಧಮನಸ್ಸಿನಿಂದ ತಮ್ಮು ಯತ್ನವಿಲ್ಲದೆ ಹೊರಟ. ಶಿವ ರಾಜಪುರದಿಂದ ರಾಮರಾಯನ ಊರಿಗೆ ಒಂದು ರಾತ್ರಿಯ ಹಾದಿ.

ತಮ್ಮು ತಕ್ಕ ಸಮಯದಲ್ಲಿ ಅಲ್ಲಿಗೆ ಹೋಗಿ ಮುಟ್ಟಿದ. ರಾಮ ರಾಯನೂ, ರಾಮಸ್ವಾಮಿಯೂ ಅವನ ಬರವನ್ನೇ ಹಾರೈಸುತ್ತ ಬಾಗಿ ಲಲ್ಲಿ ನಿಂತವರು, ಅವನನ್ನು ಸಂತೋಷದಿಂದ ಬರಮಾಡಿಕೊಂಡರು. ಅವರ ಮನಸ್ಸು ಅವನನ್ನು ಕಂಡು, ತನಿಹಣ್ಣನ್ನು ಕಂಡ ಗಿಳಿಯಂತಾ ಯಿತು. 'ಬಂದಿರಾ, ರಾಯರೇ!' ಎಂದು ಒಂದಿಷ್ಟು 'ಗೇಲಿ'ಮಾಡಿ ಅವರು ಅವನನ್ನು ಉಪಚರಿಸಿದರು. 'ನಡೆಯಣ್ಣಾ! ಇನ್ನು ಪೇಟೆಗೆ. ನಮ್ಮಲ್ಲಿ 'ಕಾಫೀಗೀಫಿ' ಸಂಪ್ರದಾಯವೊಂದೂ ಇನ್ನೂ ಮನೆಯೊಳಗೆ ಬಂದಿಲ್ಲ. ಅಮ್ಮನಿಗೆ ಮಡಿ ಹೆಚ್ಚು; ಅಪ್ಪನಿಗೆ ಅದು ಬೇಕಿಲ್ಲ. ಎಲ್ಲಿಯಾದರೂ ಹೋಟಲಲ್ಲಿ ಇಷ್ಟು ಕಾಫೀ ಕುಡಿದು ಬರುವ' ಎಂದು ರಾಮರಾಯ ಹೇಳಿದ ಹೊರಟರು.

ರಾಮರಾಯನ ಊರು ಅದೊಂದು ಹಳ್ಳಿ. ಆದರೆ ಅಲ್ಲಿನ ದೇವ ಸ್ಥಾನವೂ, ತೀರ್ಥವೂ ಬಹಳ ಹೆಸರಾದುದು. ಅಲ್ಲಿ ವರ್ಷಂಪ್ರತಿ ಜಾತ್ರೆಗೆ ಸಾವಿರಾರು ಮಂದಿ ನೆರೆಯುವರು. ಜಾತ್ರೆ ಮೂರು ದಿನ ವೈಭವದಿಂದ ನಡೆಯುವುದು,--ಒಂದು ದಿನ ರಾತ್ರಿ ಉತ್ಸವ; ಮರುದಿನ ಹಗಲು ತೇರು; ಮೂರನೆಯ ದಿನವೇ ಓಕುಳಿ.

ರಾಮರಾಯ ಜಾತ್ರೆಗೆ ಬಂದಿದ್ದ ಅಂಗಡಿಗಳನ್ನೆಲ್ಲ ತಮ್ಮನಿಗೆ ತೋರಿಸುತ್ತ ನಡೆದ. ವಸ್ತ್ರದ ಅಂಗಡಿ, ಪಾತ್ರೆಗಳ ಅಂಗಡಿ, ಮಣಿಸರಕಿನ ಅಂಗಡಿ, ಪುಸ್ತಕ-ಚಿತ್ರಗಳ ಅಂಗಡಿ, ಗಡಿಯಾರಗಳ ಅಂಗಡಿ, ಪಾದ ರಕ್ಷೆ-ಕೊಡೆಗಳ ಅಂಗಡಿ, ಮಿಠಾಯಿಗಳ ಅಂಗಡಿ, ಹಣ್ಣು ಹಂಪಲುಗಳ ಅಂಗಡಿ, ಹೂ, ವೀಳ್ಯಗಳ ಅಂಗಡಿ ಅದೆಷ್ಟು! ಕಾಫೀ ಹೋಟೆಲುಗಳಿಗೂ ಕಡಿಮೆ ಇರಲಿಲ್ಲ. ಕರ್ಪೂರ, ಊದಿನ ಬತ್ತಿ ಮಾರುವವರೂ ಹೇರಳ ವಾಗಿದ್ದರು. ಅಲ್ಲೊಂದು ಕಡೆ ಒಬ್ಬನು 'ಲಾಟರಿ'ಯನ್ನು ಏರ್ಪಡಿಸಿದ್ದ. ಜನರು ಹಾಗೇ ಅಲ್ಲಿ ಕಿಕ್ಕಿರಿದಿದ್ದರು. ಅವರಲ್ಲಿ ಕೆಲವರು ಆಣೆ, ಅರ್ಧಾಣೆ ಕೊಟ್ಟು, ಚೀಟಿತ್ತಿ, ಅದರಲ್ಲಿ ಬರೆದಂತೆ, ಒಂದು ಗಾಜಿನ ಗುಂಡಿಯನ್ನೋ, ಒಂದು ಸೂಜಿಯನ್ನೋ, ಒಂದು ಚೂರಿಯನ್ನೋ ಪಡೆದು ಕೃತಾರ್ಥರಾಗುತ್ತಿದ್ದರು. ಇನ್ನೊಂದು ಕಡೆ ಮತ್ತೆ ಕೆಲವರು ತೂಗುವ ತೊಟ್ಟಿಲುಗಳಲ್ಲಿ ಕುಳಿತು ವಿನೋದಗೊಳ್ಳುತ್ತಿದ್ದರು. ಮತ್ತೊಂದು ಕಡೆ, ಸಣ್ಣದೊಂದು ತಡಿಕೆಯ ಗುಡಿಸಲಲ್ಲಿ ಇಟ್ಟಿದ್ದ 2 ಹುಲಿ ಮರಿ ಗಳನ್ನು ಆಳಿಗೊಂದು ಬಿಲ್ಲೆಯಂತೆ ಕೊಟ್ಟು ಜನಗಳು ನೋಡಿ ಬರು ತ್ತಿದ್ದರು. ಬೇರೊಂದು ಕಡೆ ಕನಡಾ ಜಿಲ್ಲೆಯ ಗೊಂಬೆಯ ಆಟದವರು ಬಂದು ಬಿಡಾರ ಹೂಡಿಕೊಂಡಿದ್ದರು. 'ಈ ಬಾರಿ ಸರ್ಕಸಿನವರೂ ಕಾಣೆ, ನಾಟಕದವರೂ ಕಾಣೆ; ಏನೋ ಬಂದಿಲ್ಲ. ಅವರಿಲ್ಲಿಗೆ ವರ್ಷಂಪ್ರತಿ ಬರುವುದು ಪದ್ಧತಿ!' ಎಂದು ರಾಮರಾಯ ಹೇಳಿದ. ಹೇಳುತ್ತಾ, ಹೇಳುತ್ತಾ ಕಾಫೀ ಹೋಟೆಲಿನೊಳಗೆ ನುಗ್ಗಿದ.

ಕಾಫಿ ಹೋಟಲಲ್ಲಿಯೋ? ಪೂರಾ ಗಲಾಟೆ. ವಿಪರೀತ ಗಲಭೆ. 'ಕಾಫಿ' ಅಂದವರಿಗೆ ಚಾ. ಚಾ ಕೇಳಿದವರಿಗೆ ಕಾಫಿ. ಇಡ್ಡಲಿ ದೋಸೆ ಗಂತೂ ಬೇಯಲು ಹೊತ್ತಿಲ್ಲ. ದುಡ್ಡು ಕೊಟ್ಟವರು ಯಾರೋ, ಕೊಡ ದವರು ಯಾರೋ ಗೊತ್ತಿಲ್ಲ; ಯಾರಿಂದ ದುಡ್ಡೆಷ್ಟು ಬರಬೇಕೋ ಗೊತ್ತಿಲ್ಲ. 'ಕಾಫಿ' 'ಚಾ' 'ಉಪ್ಪಿಟ್ಟು' 'ದೋಸೆ' 'ಚಟ್ಣಿ' 'ಬೆಣ್ಣೆ'ಗಳೆಂಬ ಕೂಗಾಟದಲ್ಲಿ ಒಬ್ಬರಾಡಿದುದು ಇನ್ನೊಬ್ಬರಿಗೆ ಕೇಳಿಸುತ್ತಿರಲಿಲ್ಲ. ಮಧ್ಯೇ

'ಲಡಾಯಿ'ಗಳು ಬೇರೆ. 'ಕಾಫಿ ತಣ್ಣಗಿದೆ'; 'ಚಾಕ್ಕೆ ಸಕ್ಕರೆ ಹಾಕಲಿಲ್ಲ'; 'ಚಕ್ಕುಲಿ ಇವತ್ತಿನದಲ್ಲ'; 'ಬಾಳೇ ಹಣ್ಣು ಕೊಳೆತು ಹೋಗಿದೆ'; 'ದೋಸೆ ನಾವು ಕೇಳಿದ್ದಲ್ಲ'; 'ನಮ್ಮ ದುಡ್ಡು ನಾಲಕ್ಕಾಣೆಯಲ್ಲ; ಆರು ಬಿಲ್ಲೆ'; 'ಊರಲ್ಲಿ ನಿಮ್ಮದೊಂದೇ ಹೋಟಲಲ್ಲ';—ಇಂಥಾ ಚರ್ಚೆ, ಆಕ್ಷೇಪಗಳು ಬೇರೆ. ಈ ಸಮಯದಲ್ಲಿಯೇ ಮೂವರೂ ಹೋಟಲಿಗೆ ಹೊಕ್ಕರು. 'ಬರಲಿ! ಕಾಫಿ, ದೋಸೆ, ಬೆಣ್ಣೆ; ಮೂವರಿಗೆ ಮೂರು ಮೂರು!' ಎಂದರು.

ರಾಮಸ್ವಾಮಿ 'ನೋಡಿದೆಯೇನೋ, ಟೋಪಿ! ಹೋಟಲ ಗಲಾಟೆ! ದೇವಸ್ಥಾನಕ್ಕಿಂತಲೂ ಇಲ್ಲಿನ ಗಲಾಟೆಯೇ ಹೆಚ್ಚಾಗಿದೆ. ಇವರೆಲ್ಲಾ ಏನು ತೀರ್ಥಸ್ನಾನಕ್ಕೆ ಬಂದವರೋ, ಕಾಫೀಸ್ನಾನಕ್ಕೆ ಬಂದವರೋ! ಅಲ್ಲಿ ನೋಡು—ಆ ಕಾಫಿ ಮಾಡುವವನನ್ನು! ಕರೀ ಟೊಣಪ; ಎಂಥಾ ಕೊಳಕು ಬಟ್ಟೆ ಉಟ್ಟಿದ್ದಾನೆ! ಹೇಗೆ ಬೆವರು ಸುರಿಸುತ್ತಾ ಇದ್ದಾನೆ! ಇವನನ್ನು ನೋಡಿದರೆ, ಇಲ್ಲಿ ನಾಯಿ ಸಹಾ ನೀರು ಕುಡಿಯದು' ಎನ್ನುವಷ್ಟರಲ್ಲಿ ಕಾಫಿ ತಿಂಡಿ ಬಂತು. 'ಅದಕ್ಕೆ ಉಪ್ಪು ಹೆಚ್ಚು; ಇದಕ್ಕೆ ಒಗ್ಗರಣೆ ಸಾಲದು' ಎಂದು ಹಾಗೇ ಬಯ್ಯುತ್ತಾ, ದೂರುತ್ತಾ ತಿಂದರು. ಕುಡಿದರು. ಹೊರಗೆ ಹೊರಟರು. 'ದುಡ್ಡು?' ಎಂದು ಕೇಳಿದುದಕ್ಕೆ, 'ಅಲ್ಲಿ ಆಗಲೇ, ಅವರ ಕೈಯಲ್ಲಿ ಕೊಟ್ಟಾಯಿತು' ಎಂದು ಬಾಯಿ ಹೊಡೆದರು. ಮನೆಗೆ ಎದ್ದರು.

---

## ಇಪ್ಪತ್ತನಾಲ್ಕನೆಯ ಅಧ್ಯಾಯ.

## ದೇವರ ದರ್ಶನ.

ಮೂವರೂ ಸಂಜೆ ಪುನಃ ಪೇಟೆಗೆ ಹೋದರು. ಅಂಗಡಿಗಳನ್ನು ನೋಡುತ್ತ ನಡೆದರು. ಅಲ್ಲಿಯೊಬ್ಬ ಕೋಮಟಿ 'ಪಟಾಕಿ' ಪೆಟ್ಟಿಗೆಗಳನ್ನು ಇಟ್ಟುಕೊಂಡಿದ್ದ. ರಾಯರು ಅದರ ಖರೀದಿಗೆ ಹೊರಟರು. ಖರೀದಿ

ಯಾಯಿತು. 3 ಪೆಟ್ಟಿಗೆ ತೆಗೆದುಕೊಂಡು, ರಾಯರು ಹೊರಟೇ ಹೋದರು. 'ದುಡ್ಡು ಕೊಡಿ!' ಎನ್ನುತ್ತ ಕೋಮಟಿಯೂ ರಾಯರನ್ನು ಹಿಂಬಾಲಿಸಿದ. ರಾಯರು 'ಹೋಗೋ, ನಿಮ್ಮ ತಾತನನ್ನು ಕೇಳೋ' ಎನ್ನುತ್ತ ಓಡಲು ಆರಂಭಿಸಿದರು; ಕೋಮಟಿಯೂ 'ದುಡ್ಡು ದುಡ್ಡೆ'ನುತ್ತ ಓಡಿದ. ಆದರೆ ರಾಯರನ್ನು ಹಿಡಿಯಲಾಗಲಿಲ್ಲ. ಕೋಮಟಿ ಮುದುಕ; ರಾಮರಾಯ ಹುಡುಗ. ಅವನು ಇವನನ್ನು ಹಿಡಿಯುವುದು ಎಲ್ಲಿಯಾದರೂ ಉಂಟೇ? ಇಷ್ಟರಲ್ಲಿ ರಾಮಸ್ವಾಮಿ ತಮ್ಮನನ್ನು ಕುರಿತು:— 'ಒಳ್ಳೇ ಸಮಯ; ಕೋಮಟಿ ರಾಮರಾಯನನ್ನು ಬೆನ್ನಟ್ಟಿ ಹೋಗಿದ್ದಾನೆ. ಬೇಗನೇ ಬರುವ ಹಾಗಿಲ್ಲ. ಆ ಪಟಾಕಿ ಪೆಟ್ಟಿಗೆಗಳನ್ನು ನೀನಷ್ಟು ಬಾಚು; ನಾನಷ್ಟು ಬಾಚುತ್ತೇನೆ. ಅವುಗಳನ್ನು ಕಟ್ಟಿಕೊಂಡು, ಕೋಮಟಿ ಬರುವುದರೊಳಗಾಗಿ ಇಲ್ಲಿಂದ ಓಡಿ ಬಿಡುವ!' ಎಂದು ಹೇಳಿದ್ದೂ ಆಯಿತು; ಬಾಚಿದ್ದೂ ಆಯಿತು; ಕಟ್ಟಿಕೊಂಡದ್ದೂ ಆಯಿತು. ತಮ್ಮ ಮಾತ್ರ ಏನೂ ಮಾಡಲಿಲ್ಲ! ನಿಂತು ನೋಡುತ್ತಾ ನಗುತ್ತಾ ಇದ್ದ. ನೋಡುತ್ತಿದ್ದಂತೆ, ಮುದಿ ಕೋಮಟಿ ಬಂದೇ ಬಿಟ್ಟ! ತಮ್ಮ 'ಕೋಮಟಿ ಬಂದ!' ಎಂದ. ರಾಮಸ್ವಾಮಿ 'ಓಡುವ!' ಎಂದ. ಕೋಮಟಿ ಈ ಸಲ ಇವರ ಹಿಂದೆ ಓಡಲಿಲ್ಲ; ಬುದ್ಧಿ ಕಲಿತಿದ್ದ. 'ಒಬ್ಬನನ್ನು ಅಟ್ಟಿಕೊಂಡು ಹೋಗಿ, ವ್ಯಾಪಾರದಲ್ಲಿ ಅರ್ಧ ಹೋಯಿತು; ಇನ್ನು ಇವರಿಬ್ಬರನ್ನೂ ಅಟ್ಟಿಕೊಂಡು ಹೋಗಿ ಪೂರಾ ಅಂಗಡಿ ಕಾಣೆಯಾಗುವುದು ಬೇಡ' ಎನ್ನುತ್ತ ಕೋಮಟಿ ಅಲ್ಲಿಯೇ ಕುಳಿತ.

ಸ್ವಲ್ಪ ಹೊತ್ತಿನ ಮೇಲೆ ಮೂವರು ಮಹಾರಾಯರೂ ಒಟ್ಟು ಸೇರಿದರು. ಕೊಳ್ಳೆ ಹೊಡೆದ 'ಪೆಟ್ಟಿಗೆಯ' ಲೆಕ್ಕಕ್ಕಾಗಿ ಸ್ವಲ್ಪ ದೂರ ಹೋಗುವ ಎಂದು ರಾಮರಾಯರ ಅಪ್ಪಣೆಯಾಯಿತು. ಅದರಂತೆ, ಅವರು ಸ್ವಲ್ಪ ದೂರದಲ್ಲಿದ್ದ, ಒಂದು ಗುಡ್ಡದ ಬುಡಕ್ಕೆ ಬಂದು ಅಲ್ಲಿ ಪೆಟ್ಟಿಗೆಗಳನ್ನು ಎಣಿಸಿದ್ದಾಯಿತು. ಅಷ್ಟರಲ್ಲಿ, ರಾಮರಾಯನು, ಅಲ್ಲಿಯೇ ಮೇಯುತ್ತಿದ್ದ ಒಂದು ಕತ್ತೆಯನ್ನು ನೋಡಿ, 'ನಮ್ಮ ಹೆಡ್ಮಾಸ್ತರರು ಯಾವಾಗಲೂ

ನನ್ನನ್ನು 'ಕತ್ತೆ' ಎನ್ನುತ್ತಾರೆ. ಅದೇಕೆ ಎಂದು ನನಗಿನ್ನೂ ತಿಳಿದಿಲ್ಲ. ಆದುದರಿಂದ ಈ ಕತ್ತೆಗೂ, ನನಗೂ ಯಾವ ಸಾಮ್ಯವಿದೆಯೋ ಅದನ್ನು ಪರೀಕ್ಷಿಸಲು ಇದೇ ಸಮಯ. ಆ ಕತ್ತೆಯನ್ನು ಹಿಡಿಯುವ; ಈ ಪಟಾಕಿ ಸರವನ್ನು ಅದರ ಬಾಲಕ್ಕೆ ಕಟ್ಟುವ; ಬೆಂಕೀ ಹಚ್ಚಿ ಜನರ ಮಧ್ಯದಲ್ಲಿ ನೂಕುವ. ಆಗ ಆ ಕತ್ತೆಗೂ, ಈ ಕತ್ತೆಗೂ ಇರುವ ಸಾಮ್ಯವೇನೆಂದು ಸುಲಭವಾಗಿ ಗೊತ್ತಾಗುವುದು. ಬನ್ನಿ! ಗೆಳೆಯರೆ! ಕತ್ತೆಯನ್ನು ಪೇಟೆಗೆ ಕೊಂಡು ಹೋಗುವ' ಎಂದು ಕತ್ತೆಯನ್ನು ನೂಕಿಕೊಂಡೂ, ಹೊಡೆದು ಕೊಂಡೂ ಬಂದುದಾಯಿತು. ಒಂದು ಅಂಗಡಿಯ ಮರೆಯಲ್ಲಿ ನಿಲ್ಲಿಸಿ, 4-6 ಪಟಾಕಿ ಸರಗಳನ್ನು ಅದರ ಬಾಲದ ಸುತ್ತಲೂ ಕಟ್ಟಿ, ಅದಕ್ಕೆ ಬೆಂಕಿಯನ್ನು ಹಚ್ಚಿದ್ದಾಯಿತು. ಆಗ ಜನರು ರಾತ್ರೆಯ ಉತ್ಸವವನ್ನು ನೋಡಲು, ಗುಂಪುಗುಂಪಾಗಿ ಬರುತ್ತಿದ್ದರು.

'ಪಟಾಕಿ' 'ಪಟ ಪಟ' ಎನ್ನುತ್ತಲೇ ಕತ್ತೆ ಗಾಬರಿಯಾಗಿ ಜನಸಂದಣಿಯ ನಡುವೆ ನುಗ್ಗಿತು. ಹಿಂಗಾಲುಗಳಿಂದ ಝಾಡಿಸಿ ಒದೆಯಲಾರಂಭಿಸಿತು. ದೇವರ ಪ್ರಸಾದಕ್ಕೆ ಬಂದ ಜನರಿಗೆ ಕತ್ತೇ ಕಾಲಿನ ಪ್ರಸಾದ ಸಿಕ್ಕಿತು. ಎಷ್ಟೋ ಜನರು ನುಗ್ಗಿನಲ್ಲಿ ಒಬ್ಬರ ಮೇಲೊಬ್ಬರು ಬಿದ್ದು, ಕಕ್ಕಾಬಿಕ್ಕಿಯಾಗಿ ಹೋದರು. ಈ ಗಲಭೆಯಲ್ಲಿ, ಅಲ್ಲೆಲ್ಲಿಯೋ ಇದ್ದ ಕುಂಬಾರನ ಮಡಿಕೆ, ಕುಡಿಕೆಗಳೆಲ್ಲವೂ, ಜನರ ತಿಕ್ಕಾಟದಿಂದ ಪುಡಿ ಎದ್ದು ಹೋದುವು. ಪಾಪ, ಕುಂಬಾರನ ಬೊಬ್ಬೆ! ಕೇಳುವವರು ಯಾರು?

ರಾಮರಾಯ, ಈ 'ತಮಾಷೆ'ಯನ್ನು ದೂರದಿಂದ ತಮ್ಮನಿಗೆ ತೋರಿಸಿ ನಗುತ್ತ 'ಇದನ್ನೆಲ್ಲ ನಮ್ಮ ಉಪಾಧ್ಯಾಯರು ನಮಗೆ ಕಲಿಸುತ್ತಾರೆಯೇ? ಇದೆಲ್ಲ ನಮ್ಮ ಶಾಲಾಪುಸ್ತಕಗಳಲ್ಲಿ ಇವೆಯೇ? ನಾವು ಪುಸ್ತಕದ ಬದನೆ ಕಾಯಿ ತಿಂದು ಯಾವ ಮೋಕ್ಷ ಸಾಧಿಸಬೇಕು? 'ತುಂಟತನ'ದಲ್ಲಿ ನಾನು 'ಎಮ್. ಎ. ಪಾಸ್ ಮಾಡಿದವನೆಂದು ನೀನು ಶಾಲೆಗೆ ಬಂದ ದಿನವೇ ನಾನು ತೋರಿಸಿದ್ದೆ. ಈ ದಿನ ಆ ಪಾಂಡಿತ್ಯಕ್ಕೆ ಇದೊಂದು ಹೆಚ್ಚಿನ ನಿದರ್ಶನ. ತಮ್ಮಾ! ಬೇಕಾದರೆ ನೀನು ನನ್ನ ಶಿಷ್ಯನಾಗು. 'ತುಂಟತನ'ದ

ಪಾಠಗಳನ್ನು ಮೂರೇ ಮೂರು ದಿನಗಳಲ್ಲಿ ಕಲಿಸಿಬಿಡುತ್ತೇನೆ ನಿನಗೆ' ಎಂದ.

ರಾತ್ರಿ ಊಟವನ್ನು ಮುಗಿಸಿ ಮೂವರೂ ದೇವಸ್ಥಾನಕ್ಕೆ ಬಂದರು. ದೇವಸ್ಥಾನದೊಳಗೆ ಭಾರೀ ನೂಕು ನುಗ್ಗು. ಒಳಗೂ, ಹೊರಗೂ ಕಾಲಿಡಲು ಸ್ಥಳವಿಲ್ಲದಂತೆ ಊರ, ಪರವೂರ ಜನಗಳು ಸೇರಿದ್ದರು. ರಾಮರಾಯ ಹೊರಗಡೆಯಿಂದ ತಮ್ಮುವಿಗೆ ದೇವಸ್ಥಾನವನ್ನು ತೋರಿ ಸುತ್ತಾ, ಅದರ ಚರಿತ್ರೆಯನ್ನು ವಿಸ್ತರಿಸುತ್ತಾ ಬಂದ. ತಮ್ಮು ಆ ದೇವ ಸ್ಥಾನದ ಮನೋಹರವಾದ ಕಲಾಕೌಶಲದ ಭಾಗಗಳನ್ನು ನೋಡುತ್ತಾ, ಆ ಚರಿತ್ರೆಯನ್ನು ಕಿವಿಗೊಟ್ಟು ಕೇಳುತ್ತಾ ಮೆಲ್ಲಗೆ ಪ್ರದಕ್ಷಿಣೆ ಬರುತ್ತಿದ್ದ. ದೇವಸ್ಥಾನವು ಅದೊಂದು ಅನಾದಿಯಾದ ಪ್ರಾಚೀನ ದೇವಸ್ಥಾನ ವಾಗಿತ್ತು. ಯಾವನೋ ಒಬ್ಬ ತುಂಡರಸು ಎಷ್ಟೋ ಶತಮಾನಗಳ ಹಿಂದೆ ಈ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿಸಿ, ಆ ದೇವರನ್ನು ಭಕ್ತಿಯಿಂದ ಸೇವಿಸಿಕೊಂಡು ಬರುತ್ತಿದ್ದನಂತೆ. ಆ ಕಾಲದಲ್ಲಿ ಜೀವಿಸಿ ಕೊಂಡಿದ್ದ ವಿಚಕ್ಷಣರಾದ ಶಿಲ್ಪಿಗಳೇ ಈ ದೇವಸ್ಥಾನದ ಜೀರ್ಣೋ ದ್ಧಾರದ ಕೆಲಸವನ್ನು ಕೈಕೊಂಡು ಪೂರೈಸಿದ್ದರಂತೆ ಆ ಶಿಲ್ಪಿಗಳು ಗತಿಸಿ, ನೂರಾರು ವರ್ಷಗಳು ಕಳೆದರೂ, ಅವರ ಅಪ್ರತಿಮವಾದ ಕಲಾಕೌಶಲದ ಪ್ರತಿಮೆಗಳೂ, ಚಿತ್ರಗಳೂ ನಿನ್ನೆ ತಾನೇ ಮಾಡಿದವುಗಳ ಹಾಗೆ ನೂತನ ವಾಗಿದ್ದುವು. ಅಲ್ಲಲ್ಲಿ ಕಲ್ಲಿನಲ್ಲಿ ಕೆತ್ತಿ ಬಿಡಿಸಿದ ದಶಾವತಾರದ, ರಾಮಾಯಣ—ಭಾರತ—ಭಾಗವತಗಳ ಪ್ರತಿಮೆಗಳೂ, ದೊಡ್ಡ, ಸಣ್ಣ ಸಂಕೋಲೆಗಳು, ವಿಚಿತ್ರವಾದ ಬಳ್ಳಿಗಳು, ಎಲೆಗಳು, ಹಣ್ಣು ಕಾಯಿಗಳು, ಮೃಗ, ಪಕ್ಷಿಗಳೂ, ಕೂದಲೆಳೆಯಷ್ಟು ಸೂಕ್ಷ್ಮವಾದ ಇತರ ಚಿತ್ರಗಳೂ ಜೀವಕಲೆಯನ್ನು ತಳೆದಿರುವುವೊ ಎಂಬಂತೆ ನೋಡುವವರ ಮನಸ್ಸಿನಲ್ಲಿ ಅತಿಶಯವಾದ ವಿಸ್ಮಯವನ್ನು ಉಂಟುಮಾಡುತ್ತಿದ್ದುವು. ಒಂದು ಕಾಲ ದಲ್ಲಿ, ನಮ್ಮ ದೇಶದ ಶಿಲ್ಪಕಲೆಯು ಎಂಥಾ ಉತ್ಕೃಷ್ಟ ಸ್ಥಿತಿಯಲ್ಲಿತ್ತೆಂದು ಬೆರಳಿಟ್ಟು ತೋರಿಸುತ್ತಿದ್ದುವು. ತಮ್ಮು, ದೇವಸ್ಥಾನದ ಸುತ್ತಲೂ

ಹಗಲಿನಂತೆ ಬೆಳಗುತ್ತಿದ್ದ ದೀಪಗಳ ಬೆಳಕಿನಲ್ಲಿ, ಅದ್ಭುತವಾದ ಈ ಚಿತ್ರವಿಶೇಷಗಳನ್ನು ನೋಡುತ್ತಾ, ವಿಸ್ಮಯಗೊಂಡು ಬೆರಗಾಗುತ್ತ, ಮುಂದೆ ಮೆಲ್ಲಗೆ ಗರ್ಭಗುಡಿಗೆ, ರಾಮರಾಯನೊಡನೆ ಕಾಲಿಟ್ಟ. ದೇವರ ದರ್ಶನ ಮಾಡಿದ. ದೇವರಿಗೆ ಅಡ್ಡ ಬಿದ್ದ.

ಗರ್ಭಗುಡಿಯೊಳಗೆ ಬಂದು ಹೋಗುವವರ ಗಲಾಟೆಯನ್ನು ಏನು ನೋಡುತ್ತೀರಿ? ಕಾಣಿಕೆ ಹಾಕುವವರ ಗಲಭೆ; ಹರಿಕೆಯೊಪ್ಪಿಸುವವರ 'ಕಲ ಕಲ'; ಹಣ್ಣುಕಾಯಿ ಅವಾಂತರ; ಹೇಳಿ ತುದಿಯಿಲ್ಲ. ತೀರ್ಥ ಪ್ರಸಾದ ಕೊಡಲಿಕ್ಕೆ ಆ ದಿನ ಎಷ್ಟು ಮಂದಿ ಇದ್ದರೂ ಸಾಲದು. ಹಣ್ಣುಕಾಯಿ ಒಡೆಯಲಿಕ್ಕೂ ಹಾಗೆಯೇ. ಅಂದಿನ ಸೇವೆ, ಪೂಜೆ ಪಾರಾಯಣಗಳಿಷ್ಟೇ ಎಂದು ಲೆಕ್ಕ ಮಾಡುವ ಹಾಗಿಲ್ಲ. ದೇವರ ಅಲಂಕಾರವನ್ನೂ ವರ್ಣಿಸಿ ಮುಗಿಸುವ ಹಾಗಿಲ್ಲ. ಶಿವ–ಪಾರ್ವತಿಯರ ವಿಗ್ರಹಗಳು ಮೊದಲೇ ಸರ್ವಾಂಗಸುಂದರವಾದುವುಗಳು; ಅದರ ಮೇಲೆ ಇಂದು ಕಣ್ಣು ಕೋರೈಸಿ ಹೋಗುವಂತೆ ಉತ್ಸವದ ಸರ್ವಾಲಂಕಾರ! ದೇವ–ದೇವಿಯರು, ಆ ಉಮಾಮಹೇಶ್ವರರು, ಈಗ ಹುಣ್ಣಿಮೆಯ ಚಂದ್ರನ ಹಾಗೆ, ಪೂರ್ಣಕಳೆಯಿಂದ ಕೂಡಿ ಹೊಳೆಯುತ್ತಿದ್ದರು. ನೋಡಿದವರಲ್ಲಿ ಗಾಢವಾದ ಭಕ್ತಿಯನ್ನು ಹುಟ್ಟಿಸುತ್ತಿದ್ದರು.

ಗರ್ಭಗುಡಿಯಿಂದ ಹೊರಹೊರಟು ಮೂವರೂ 'ಗೊಂಬೆಯಾಟದ ರಂಗಸ್ಥಳ'ದ ಬಳಿಗೆ ಬಂದರು. 'ಉತ್ಸವ ತೊಡಗಲು ಇನ್ನೂ 4 ಗಂಟೆ ಕಾಲವಿದೆ. ರಾತ್ರಿ 1 ಗಂಟೆಗೆ ಉತ್ಸವ. ಅಲ್ಲಿನ ತನಕ ಈ ಆಟವನ್ನು ಏಕೆ ನೋಡಬಾರದು?' ಎಂದು ರಾಮರಾಯ ಹೇಳಿದ. ಗೆಳೆಯರು ಆಗಲೆಂದರು. ಟಿಕೆಟ್ ಪಡೆದು ಒಳಗೆ ಹೋದರು. ನೋಡಿದರು. $12\frac{3}{4}$ ಗಂಟೆಗೆ ಅದು ಮುಗಿಯಿತು.

ಹಿಂದಿರುಗಿ ಬರುತ್ತಾ ರಾಮರಾಯ 'ಏನೋ ಎಂದಿದ್ದೆ. ಆಟ ಚೆನ್ನಾಗಿತ್ತು. ಗೊಂಬೆಗಳನ್ನು ಚೆನ್ನಾಗಿ ಕುಣಿಸಿದರು.' ಎಂದ.

ತಮ್ಮ:—'ಗೊಂಬೆಯ ಆಟವು ಚೆಂದವೇ. ಆ ಕುಶಲ ಕಲೆ ಕನ್ನಡ ಜಿಲ್ಲೆಯವರಿಗೆ ಮಾರಿ ಹೋಗಿದೆ ಅದರಲ್ಲಿಯೂ ಈ ದಿನ 'ರತ್ನಾವತಿ ಕಲ್ಯಾಣ'. ನಮ್ಮ ಕಡೆಯಲ್ಲಿಯೂ ಆಡುತ್ತಾರೆ. ಹೊತ್ತು ಸಾಲದೆಂದು ಇವರು ಸಂಕ್ಷೇಪಿಸಿ ಆಡಿದರು. ಆದರೂ ಆಟ ಸಮರ್ಪಕ ವಾಗಿತ್ತು.'

ರಾಮಸ್ವಾಮಿ:—'ಅದರಲ್ಲಿ ನನಗೆ ಎಲ್ಲದಕ್ಕಿಂತಲೂ ವಿಶೇಷವಾಗಿ ತೋರಿದುದು ಕವಿಯ ಜಾಣತನ.'

ತಮ್ಮ:—'ಕವಿ ಕನ್ನಡ ಜಿಲ್ಲೆಯವನಂತೆ. ಆತ ಮಹಾಕವಿ. ಅನೇಕ ಪ್ರಸಿದ್ಧ ಗ್ರಂಥಗಳನ್ನು ಕನ್ನಡದಲ್ಲಿ ಬರೆದವ. ಇದೇ ಕೆಲವು ವರ್ಷಗಳ ಹಿಂದೆ ಹೋದ. ಅವನ ಹೆಸರು ನಂದಳಿಕೆ ಲಕ್ಷ್ಮೀನಾರಣಪ್ಪ— ಹೀಗೆಂದು ನಮ್ಮ ಕನ್ನಡ ಪಂಡಿತರು ಹೇಳುವುದನ್ನು ಕೇಳಿದ್ದೇನೆ.'

ರಾಮಸ್ವಾಮಿ:—'ದಕ್ಷಿಣ ಕನ್ನಡವೆಂದರೆ ತುಳು ಸೀಮೆ; ಅಲ್ಲಿನ ಕನ್ನಡವೆಲ್ಲ ಹರಕು ಮುರುಕು ಎನ್ನುತ್ತಾರಲ್ಲ! ಹಾಗಾದರೆ ಈ ಕವಿ ಅಲ್ಲೆಲ್ಲಿ ಬಂದ? ಇದೂ ಒಂದು ಆಶ್ಚರ್ಯವೇ. ಕೆಸರಲ್ಲಿ ಹುಟ್ಟಿಯೂ ಹೆಸರಾದ ತಾವರೆಯ ಹಾಗೆ!'

ಅಷ್ಟರಲ್ಲಿ ಉತ್ಸವ ತೊಡಗಿತು. ದೇವರು ಹೊರಟರು. ಬೆಳಗಿನ ತನಕವೂ ಉತ್ಸವವಾಯಿತು. ವಾದ್ಯಘೋಷ, ಜನಸ್ತೋಮದ ಗದ್ದಲ, ಬಾಣಬಿರುಸುಗಳ ಕೋಲಾಹಲ ಇವೂ ಏಕಪ್ರಕಾರ ನಡೆಯಿತು. ರಾತ್ರಿ ಮೂರು ಗಂಟೆಯ ಮೇಲೆ ಉತ್ಸಾಹ ತಗ್ಗಿ, ಉತ್ಸವ ಸಾಕೆಂದು ಮೂರು ಮಂದಿ ವೀರರೂ ಮನೆಗೆ ಬಂದು ಮಲಗಿದರು. ಉತ್ಸವವನ್ನು ನೋಡಲು ಬಂದಿದ್ದವರಲ್ಲಿ ಹಲವರೂ ಹೀಗೆಯೇ ದೇವಸ್ಥಾನದ ಜಗುಲಿಯಲ್ಲಿಯೂ, ಪೌಳಿಗಳಲ್ಲಿಯೂ, ಹೊರಗಿನ ಹೊಲದಲ್ಲಿಯೂ, ಮರಗಳ ಬುಡದಲ್ಲಿಯೂ ಮಲಗಿ ಬೆಳಗಿನ ತನಕ ಕಣ್ಣು ತುಂಬ ಕುಂಭಕರ್ಣನ ಉತ್ಸವ ನೋಡಿದರು.

---

ಇಪ್ಪತ್ತೈದನೆಯ ಅಧ್ಯಾಯ.

## ಕಾಲುಚೆಂಡಿನ ಪಂಥ.

ಜಾತ್ರೆ ಮುಗಿಸಿಕೊಂಡು ಮೂವರೂ ಶಿವರಾಜಪುರಕ್ಕೆ ಬಂದರು. ಈ ಬಾರಿ ಅವರು ಒಂದೇ ಕೊಟ್ಟಡಿಯಲ್ಲಿ ವಾಸಮಾಡುತ್ತಿದ್ದರು. ಹಾದಿಯಲ್ಲಿ ಮಾತಾಡಿಕೊಂಡು ಏರ್ಪಡಿಸಿದಂತೆ ಅವರ ಆಟ—ಊಟ—ತಿರುಗಾಟಗಳೆಲ್ಲ ಒಟ್ಟಿಗೆ ಏಕಕಾಲದಲ್ಲಿ ನಡೆಯುತ್ತಿದ್ದುವು. ಒಬ್ಬರನ್ನು ಬಿಟ್ಟು ಒಬ್ಬರು ಇರುತ್ತಿರಲಿಲ್ಲ. ತಮ್ಮು ಕೆಲವು ಕಾಲ ವೈರಾಗ್ಯ ಹಿಡಿದು ಬಿಟ್ಟಿದ್ದ ಆ ಖರ್ಚಿನ ಪದ್ಧತಿಗಳು ಈಗ ಅರ್ಧ ಮನಸ್ಸಿನಿಂದಾದರೂ ಪುನಃ 'ಜ್ಯಾರಿಗೆ' ಬಂದುವು. ಸಿಗರೆಟ್ ಸೇದಬೇಕಾಯಿತು 'ಕ್ರಾಫ್' ಬಿಡಿಸಬೇಕಾಯಿತು. ನೆಕ್ಕಟ್ಯಾ, ಕಾಲರುಗಳನ್ನು ಉಪಯೋಗಿಸಬೇಕಾಯಿತು. ಕಾಫಿ ಹೋಟೆಲಿಗೆ ಸಾರಿ ನಡೆಯಬೇಕಾಯಿತು. ತುಂಡು ಅಂಗಿ, ತುಂಡು ಚಲ್ಲಣಗಳನ್ನು ಮಾಡಿಸಬೇಕಾಯಿತು. ಸ್ನೇಹಿತರು ಅಪ್ಪಣೆ ಕೊಟ್ಟಷ್ಟೇ ಓದಬೇಕಾಯಿತು. ಆದರೆ ಅಷ್ಟು ಓದಲಿಕ್ಕೂ ತಮ್ಮುವಿಗೆ ಅವಕಾಶವಿಲ್ಲ. ಇವರ ಕೊಟ್ಟಡಿ ಎಂಬುದು ಸೋಮಾರಿಗಳಿಗೊಂದು ಕ್ಲಬ್ಬಿನ ಹಾಗಿತ್ತು. ಮೇಲ್ವಿಚಾರಕರು ಒಮ್ಮೆ ಮೇಲ್ವಿಚಾರವನ್ನು ಮುಗಿಸಿ ಹೋದೊಡನೆಯೇ, ಕೆಲವು ಮಂದಿ ಮೈಗಳ್ಳ ವಿದ್ಯಾರ್ಥಿಗಳು ಈ ಕೊಟ್ಟಡಿಯಲ್ಲಿ ಸಭೆ ಸೇರುವರು. ಹರಟುವರು ಇಸ್ಪೀಟಾಡುವರು. ಆ ದೆಸೆಯಿಂದ ತಮ್ಮುವಿಗೆ ಓದಲು ಅವಕಾಶವಿಲ್ಲ. ಏನು ಸೋಜಿಗವಿದು! ಈ ಸಹವಾಸವನ್ನು ಇನ್ನೂ ಕಟ್ಟಿಕೊಂಡು ತಮ್ಮು ಒದೆದಾಡುವನೇಕೆ? ಹಿಂದಿನದೆಲ್ಲ ಅವನಿಗೆ ಮರೆತುಹೋಯಿತೇಕೆ? ಹುಚ್ಚು ಹುಡುಗ! ಅಂಡೆಯೊಳಗಿಟ್ಟ ನಾಯಿಬಾಲದಂತಾಯಿತಲ್ಲ ಅವನ ಬುದ್ಧಿ?

'ಫೂಟ್‌ಬಾಲ್ ಟೂರ್ನ್‌ಮೆಂಟಿನ' ಆ ದಿನ ಬಂತು. ಯಾವುದೋ ಒಂದು ದುರ್ಬಲವಾದ ಟೀಮನ್ನು ಈ ಶಾಲೆಯವರು ಎರಡು ದಿನಗಳಿಗೆ ಹಿಂದೆ ಸೋಲಿಸಿ ಕಳುಹಿದುದಾಯಿತು. ಈ ದಿನ ಕೊನೆಯ ಆಟ.

ಕಾಲೇಜಿನವರಿಗೂ, ಹೈಸ್ಕೂಲಿನವರಿಗೂ. ಈ ದಿನ ಗೆದ್ದವರಿಗೆ 'ಕಪ್ಪು'. ಪಂದ್ಯಾಟವು ಆರಂಭವಾದಂದಿನಿಂದಲೂ ತಮ್ಮ ಪಾರವನ್ನು ಮುಟ್ಟಿದು ದಿಲ್ಲ. ಈ ದಿನವೂ ಹಾಗೆಯೇ; ಬೆಳಗಿನಿಂದ ಆಟದ ಹೊತ್ತು ಯಾವಾಗ ಬರುವುದೋ ಎಂದು ಮೂವರೂ ಆತುರದಿಂದ ನಿರೀಕ್ಷಿಸಿಕೊಂಡಿದ್ದರು. ಹೊತ್ತಿಗೆ ಮೊದಲೇ, ಆಟದ ಸುಪರಿಂಟೆಂಡೆಂಟರು ಈ ಮೂವರೂ ಬರ ಲೆಂದು ಹೇಳಿಕಳುಹಿಸಿದರು. ಎಲ್ಲರೂ ಸೇರಿ ಆಟದ ಮೈದಾನಿಗೆ ಹೋದರು.

ಕೊನೆಯ ದಿನದ ಆಟವನ್ನು ನೋಡಲಿಕ್ಕಾಗಿ ಬಹು ಜನರು ಬಂದು ನೆರೆದಿದ್ದರು. ಅನೇಕ ಮಂದಿ ಶ್ರೀಮಂತರೂ, ನಾಗರಿಕರೂ, ಉದ್ಯೋಗಸ್ಥರೂ ತಮಗಾಗಿ ಏರ್ಪಡಿಸಿದ್ದ ಆಸನಗಳಲ್ಲಿ ಸುಖವಾಗಿ ಕುಳಿತಿದ್ದರು. ಶಾಲೆಯ ಎಲ್ಲ ವಿದ್ಯಾರ್ಥಿಗಳೂ ತಪ್ಪದೆ ಹಾಜರಾಗಿದ್ದರು. ಆಡುವ ಪಂಗಡಗಳ ಶಾಲೆಗೆ ಸೇರಿದ ವಿದ್ಯಾರ್ಥಿಗಳು ಆಯಾ 'ಗೋಲು'ಗಳ ಸಮೀಪದಲ್ಲಿ ಕಾದು ಕುಳಿತಿದ್ದರು. ಎರಡು ಪಂಗಡಗಳೂ ಸಮಬಲವೆಂದೂ, ಆ ಕಾರಣ ಆಟವು ಜೋರಾಗಿರಬಹುದೆಂದೂ ನಿರೀಕ್ಷಿಸಲಾಗಿತ್ತು. ಆಟಕ್ಕೆ ಮೊದಲು 'ರೆಫರಿ' 'ಶೀಟಿ' ಹಾಕಿದುದಾಯಿತು. ಇತ್ತಂಡದ ಆಟಗಾರರೂ, ಆಟಕ್ಕೆ ಇಳಿದರು. ಆಯಾ ಸ್ಥಾನಗಳಲ್ಲಿ ನಿಂತರು. ಒಂದೊಂದು ಪಂಗಡದವರೂ, ಗುರುತಿಸಲಿಕ್ಕೆ ಅನುಕೂಲವಾಗುವ ಹಾಗೆ, ಒಂದೊಂದು ಬಣ್ಣದ ಉಡುಗೆಗಳನ್ನು ಧರಿಸಿದ್ದರು. ಚೆಂಡನ್ನು ಆಡುವ ಸ್ಥಳದ ಮಧ್ಯದಲ್ಲಿ ಇಟ್ಟಿತು. ಎರಡನೆಯ ಬಾರಿ 'ಶೀಟಿ' ಕೇಳಿತು. ಚೆಂಡು ಹೊರಳಿತು. ಆಚೆಗೂ, ಈಚೆಗೂ ಉರುಳಲಾರಂಭಿಸಿತು.

ಸ್ವಲ್ಪ ಹೊತ್ತು ಚೆಂಡು, ಆಚೆಗೂ, ಈಚೆಗೂ ಹೊರಳುತಿತ್ತು. ಕಾಲಿಂದ ಕಾಲಿಗೆ ಚೆಂಡು ಸಿಕ್ಕಿ ಹಿಂದಕ್ಕೂ, ಮುಂದಕ್ಕೂ ಚೆಂಡು ಆಡುತ್ತಿತ್ತು. ಒಂದು ಪಂಗಡದ ಆಟಗಾರನು, ಚೆಂಡನ್ನು ಆಚೆಯ ಗೋಲಿನ ವರೆಗೆ ದಾಟಿಸಲಿಕ್ಕಾಗಿ, ಚೆಂಡನ್ನು ತನ್ನ ಸಮೀಪದಲ್ಲಿರುವ ತನ್ನ ಕಡೆಯವನ

ಕಾಲಿಗೆ ಸಿಕ್ಕುವಂತೆ ದಾಟಿಸುತ್ತಿದ್ದನು. ನಡುವಿನಲ್ಲಿ, ಎದುರು ಕಡೆಯುವನು ಓಡಿ ಬಂದು, ಅದನ್ನು ತಡೆದು ಪ್ರತಿಪಕ್ಷದ ಕಡೆಗೇ ತಿರುಗಿಸುತ್ತಿದ್ದನು. ಪುನಃ ಆ ಚೆಂಡನ್ನು ಆ ಕಡೆಯವರೋ, ಈ ಕಡೆಯವರೋ ತೆಗೆದುಕೊಂಡು ಎದುರು ಪಕ್ಷದ ಗೋಲಿನ ಕಡೆಗೆ ಓಡಿಸಲು ಯತ್ನಿಸುತ್ತಿದ್ದರು. ಅಕಸ್ಮಾತ್ತಾಗಿ ಚೆಂಡು ರಾಮರಾಯನ ಕಾಲಿಗೆ ಸಿಕ್ಕಿತು. ರಾಮರಾಯನು ಸಿಕ್ಕಿದ ಆ ಚೆಂಡನ್ನು, ಎದುರು ಕಡೆಯವರ ಕಾಲಿಗೆ ಸಿಕ್ಕದಂತೆ, ಉಪಾಯದಿಂದ ಹೊರಳಿಸುತ್ತ, ಕಾಲೇಜ್ ಗೋಲಿನ ವರೆಗೆ ಓಡಿಸಿಕೊಂಡು ಬಂದನು. ಇವನೆಲ್ಲಿ ಗೋಲಿನೊಳಗೆ ಹೊಡೆದು ಬಿಡುವನೋ ಎಂದು—'ಕಾಲೇಜ್' ಪಂಗಡದವರೆಲ್ಲ ಗೋಲಿನ ಸಮೀಪಕ್ಕೆ ಓಡಿ ಬಂದು ಅವನನ್ನು ತಡೆದರು. ಅಷ್ಟರಲ್ಲಿ ಹ್ಯಾಸ್ಕೂಲ್ ಟೀಮಿನವರೂ ರಾಮರಾಯನ ಬೆಂಬಲಕ್ಕೆ ಓಡಿ ಬಂದರು. ಗೋಲಿಗೆ ಎದುರಿನಲ್ಲಿ ಎರಡು ಕಡೆಯವರಿಗೂ 'ಝುಟಾಪಟಿ'ಯಾಯಿತು. ಕೊನೆಗೆ ಚೆಂಡು ಕಾಲೇಜ್ ಟೀಮಿನ ಒಬ್ಬ ಆಟಗಾರನ ಕಾಲಿಗೆ ಸಿಕ್ಕಿ, ಅವನು ಅದನ್ನು ಹ್ಯಾಸ್ಕೂಲ್ ಗೋಲಿನ ಕಡೆಗೆ ಓಡಿಸಿಕೊಂಡು ಬಂದನು. 'ಓಡು, ಓಡು' ಎಂದು ಜನರು ಕೂಗಿದರು. ತಮ್ಮು ಗೋಲಿನ ರಕ್ಷಣೆಗಾಗಿ ನಿಂತಿದ್ದ. ಸ್ಕೂಲ್ ಟೀಮಿನವರು, ಗೋಲಿನ ಬಳಿಗೆ ಓಡಿ ಬರುವಷ್ಟರಲ್ಲಿ ತಮ್ಮು ಆ ಚೆಂಡನ್ನು ಜೋರಾಗಿ ಒದ್ದು ತನ್ನ ಕಡೆಯ ರಾಮಸ್ವಾಮಿಯ ಬಳಿಗೆ ಕಳುಹಿದನು. ರಾಮಸ್ವಾಮಿ ಅದನ್ನು ತೆಗೆದುಕೊಂಡು, ಎದುರಿಗೆ ಬಂದವರನ್ನೆಲ್ಲ ಹಿಂದೆ ಹಾಕಿ, ಗೋಲಿನ ಸಮೀಪಕ್ಕೆ ಬಂದು, ಗೋಲಿನೊಳಗೆ ಚೆಂಡನ್ನು ಒದ್ದನು. 'ಗೋಲ್! ಗೋಲ್' ಎಂದು ಬೊಬ್ಬೆ ಎದ್ದಿತು. ಆದರೆ ಅದು 'ಗೋಲ್' ಆಗಿರಲಿಲ್ಲ. ಚೆಂಡು ಆಯ ತಪ್ಪಿ ಗೋಲಿನ ಕಂಬಗಳ ಹೊರಗೆ ಹೋಗಿ ಬಿದ್ದಿತ್ತು.

ಗೋಲಿನ ಹೊರಗೆ ಬಿದ್ದಿದ್ದ ಚೆಂಡನ್ನು ಸರಿಯಾದ ಸ್ಥಳದಲ್ಲಿ ಇಟ್ಟು, ಹೊಡೆದುದಾಯಿತು. ಅದನ್ನು ತಡೆದುದಾಯಿತು. ಚೆಂಡು ಅತ್ತಲೂ, ಇತ್ತಲೂ ಉರುಳುತ್ತಿತ್ತು. ಆಟಗಾರರು ಜೋರಾಗಿ ಅದರ ಹಿಂದೆ ಓಡುತ್ತಿದ್ದರು. ಅಷ್ಟರಲ್ಲಿ 'ಶೀಟ' ಕೇಳಿತು. ಇನ್ನು 10 ನಿಮಿಷ ವಿರಾಮ.

ಆಟಗಾರರೆಲ್ಲ ಅಲ್ಲಲ್ಲಿ ಹೋಗಿ ಕುಳಿತರು. ಸ್ವಲ್ಪ ದಣುವಾರಿಸಿ ಕೊಂಡರು. ಸೋಡಾ, ಲಿಮೊನೆಡ್‌ನ್ನು ಕುಡಿದರು. 'ಶೀಟಿ' ಪುನಃ ಕೇಳಿತು. ಎದ್ದರು. 'ಗೋಲು'ಗಳನ್ನು ಬದಲಾಯಿಸಿಕೊಂಡು ನಿಂತರು. ಆಟ ಮತ್ತೆ ಪ್ರಾರಂಭವಾಯಿತು.

ಹೈಸ್ಕೂಲ್‌ನವರು ಆಟ ಆರಂಭವಾದ 5 ನಿಮಿಷಗಳಲ್ಲಿ ಚೆಂಡನ್ನು ಕಾಲೇಜ್ ಗೋಲಿನ ಬಳಿಗೆ ನೂಕಿದರು. ಇತ್ತಟ್ಟಿನ ಹಿಗ್ಗಾಮುಗ್ಗಿಯಲ್ಲಿ ಚೆಂಡು ಗೋಲೊಳಗೆ ಹೋಗದಿದ್ದರೂ, ಕಾಲೇಜಿನವರು ಆಟದ ನಿಬಂಧನೆಗೆ ವಿರೋಧವಾಗಿ ಆಡಿದರೆಂದು ರೆಫರಿಯುವರಿಂದ ಅವರಿಗೆ ದಂಡನೆ ಸಿಕ್ಕಿತು. ಕಾಲೇಜಿನ ಗೋಲಿನ ಎದುರಿನಲ್ಲಿ ಕೆಲವು ಗಜಗಳ ದೂರದಲ್ಲಿ ಚೆಂಡನ್ನು ಇಟ್ಟು, ಸ್ಕೂಲ್ ಟೀಮಿನ ಒಬ್ಬ ಆಟಗಾರನು ಅದನ್ನು ಗೋಲಿನೊಳಗೆ ಹಾರಿಸಬೇಕೆಂದೂ; ಅದನ್ನು 'ಗೋಲ್' ಕಾಯುವ ಒಬ್ಬನಲ್ಲದೆ ಆ ಕಡೆಯ ಇತರರಾರೂ ಮುಟ್ಟಕೂಡದೆಂದೂ ದಂಡನೆಯ ಕಠಿನ ನಿಬಂಧನೆ; ಕಾಲೇಜಿನ ಇತರ ಆಟಗಾರರು, ನಿರ್ವಾಹವಿಲ್ಲದೆ ಕೈಕಟ್ಟಿಕೊಂಡು ನಿಂತರು. ಚೆಂಡನ್ನು ತಂದು ಗೋಲಿನ ಎದುರಿನಲ್ಲಿ ಇಟ್ಟದ್ದಾಯಿತು. ಗೋಲಿಗೂ ಚಂಡಿಟ್ಟ ಸ್ಥಳಕ್ಕೂ ಬಹಳ ದೂರವಿಲ್ಲ; ಗುರಿ ಇಟ್ಟು ಹೊಡೆದರೆ 'ಗೋಲ್' ಆಗುವುದು ಬಹಳ ಸುಲಭ. ಸಿದ್ಧ. ಏಕೆಂದರೆ, ಚೆಂಡನ್ನು ಒದೆಯಬೇಕಾದ ಫಾಸಲೆಯು ಬಹಳ ಹತ್ತಿರವಿತ್ತಲ್ಲದೆ, ಪ್ರತಿಪಕ್ಷದ ಇತರರು ಅದನ್ನು ತಡೆಯುವ ಹಾಗೂ ಇರಲಿಲ್ಲ!

ತಮ್ಮು ಬಂದು ಚೆಂಡಿನ ಬಳಿ ನಿಂತ. ತಮ್ಮುವನ್ನು ಕಂಡೊಡನೆಯೇ 'ಗೋಲ್' ಆಗುವುದು ನಿಶ್ಚಯವೆಂದು ಪ್ರತಿಪಕ್ಷದವರು ನಿಶ್ಚಯಮಾಡಿ ಕೊಂಡರು. ತಮ್ಮು 'ರೆಫರಿ'ಯ ಶೀಟಿಯ ಶಬ್ದವನ್ನೇ ಕಾಯುತ್ತಿದ್ದ. ಕಾಲೇಜ್ ಟೀಮಿನವರಿಗೆ ಇದೊಂದು ಭಯಂಕರವಾದ ಮುಹೂರ್ತವಾಗಿತ್ತು. ಅವರು ಇನ್ನೇನು ಗೋಲಾಗುವುದೆಂದು ಕಳವಳಿಸುತ್ತ ನಿಂತಿದ್ದರು ಗೋಲ್ ಕಾಯುವವನು ಎಲ್ಲಿ ನಿಲ್ಲಬೇಕಂದು ತಿಳಿಯದೆ, ತತ್ತರಿಸುತ್ತ, ಗೋಲಿನ ಮಧ್ಯದಲ್ಲಿ ಬಂದು ನಿಂತ. ಎರಡು ಕೈಗಳನ್ನೂ ಚಾಚಿದ! ಬರುವ ಚೆಂಡನ್ನು ತಡೆಯಲಿಕ್ಕೆ!

'ಶಿಟಿ'ಯ ಶಬ್ದವಾಯಿತು. ತಮ್ಮು ಗುರಿ ಇಟ್ಟು ಚೆಂಡು ತುಳಿದ. ಗೋಲಿನ ಕಾವಲುಗಾರನ ಕೈಗೆ ನಿಲುಕದೆ, ಗೋಲಿನ ಒಂದು ಮೂಲೆಗೆ ಹೋಗಿ ಬೀಳುವಂತೆ ರಭಸದಿಂದ ತುಳಿದ. ಚೆಂಡು ಗೋಲಿನ ಕಾವಲುಗಾರನ ಬೆರಳನ್ನು ಸೋಂಕಿ, ಗೋಲಿನ ಒಂದು ಮೂಲೆಗೆ ಹೋಗಿ ಬಿತ್ತು. ಗೋಲಾಯಿತು. 'ಗೋಲ್! ಗೋಲ್!' ಎಂದು ನೇಟಿವ್ ಹ್ಯಾಸ್ಕೂಲಿನ ವಿದ್ಯಾರ್ಥಿಗಳ ಜಯಜಯಕಾರವು ಕಿವಿಯೊಡೆಯುವಂತೆ ಆರಂಭವಾಯಿತು. ನೋಡಲು ಬಂದ ಜನರ ಕಂಠವೂ ಅದರೊಡನೆ ಸೇರಿತು. ಗೋಲಾದ ಸಂತೋಷಕ್ಕಾಗಿ ಸ್ಕೂಲ್ ಟೀಮಿನ ಆಟಗಾರರು ಕೆಲವರು, ಆಟದ ಸ್ಥಳದಲ್ಲಿ ಲಾಗ ಹಾಕುತ್ತ ಬಂದರು. ರಾಮರಾಯ ತಮ್ಮುವನ್ನು ಎತ್ತಿ ಹೆಗಲ ಮೇಲೇರಿಸಿಕೊಂಡು ಕುಣಿಸಿದ; ಕೆಳಗೆ ಹಾಕಿದ.

ಪುನಃ ಆಟ ಆರಂಭವಾಯಿತು. 'ಗೋಲಿಗೆ ಗೋಲು' ಮಾಡಬೇಕೆಂದು ಕಾಲೇಜಿನವರು ರೋಷದಿಂದ ಜೀವವನ್ನು ಒಂದು ಹುಲ್ಲುಕಡ್ಡಿಗೂ ಕಡೆಮಾಡಿ ಆಡಲು ಆರಂಭಿಸಿದರು. ಅವರನ್ನು ತಡೆಯುವುದು ಸ್ಕೂಲ್ ಟೀಮಿನವರಿಗೆ ಬಹಳ ಕಷ್ಟವಾಯಿತು. ಒಮ್ಮೆ ಸ್ಕೂಲ್ ಗೋಲಿನೊಳಗೆ ಚೆಂಡು ಹೊಕ್ಕಿದಂತೆ ತೋರಿತು. ಆದರೆ 'ಇಲ್ಲ'! ತಮ್ಮು ಮಧ್ಯದಲ್ಲಿ ನುಗ್ಗಿ ಆ ಚೆಂಡು ಗೋಲಿಗೆ ಹೋಗದಂತೆ ಕಾಪಾಡಿ, ಅದೇ ಚೆಂಡನ್ನು ಪ್ರತಿಪಕ್ಷದ ಕಡೆಗೆ ಹೊರಳಿಸಿಕೊಂಡು ಬರುತ್ತಿದ್ದಾನೆ. ಅವನ ಎದುರಿಗೆ ಬಂದ ಪ್ರತಿಪಕ್ಷದ 1, 2, 3 ಮಂದಿಯಿಂದಲೂ ಚೆಂಡನ್ನು ಯುಕ್ತಿಯಿಂದ ತಪ್ಪಿಸಿಕೊಂಡು, ಗೋಲಿನ ಕಡೆಗೆ ವೇಗದಿಂದ ಓಡಿಬರುತ್ತಿದ್ದಾನೆ. ಚೆಂಡನ್ನು ಕಣ್ಣಿಗೆ ಕಾಣಿಸದಷ್ಟು ರಭಸದಿಂದ ಉರುಳಿಸುತ್ತ, ಜಿಂಕೆಯಂತೆ ಓಡುತ್ತ, ಗೋಲಿಗೆ ಬಹು ಸಮೀಪದಲ್ಲಿದ್ದಾನೆ. ಪ್ರತಿಪಕ್ಷದವರೇನು ಮಾಡಿದರೂ, ತಮ್ಮುವನ್ನು ಹಿಂಬಾಲಿಸಲಾಗಲಿಲ್ಲ! ಗೋಲಿನ ಕಾವಲುಗಾರನು, ಸಮೀಪಕ್ಕೆ ಬಂದ ತಮ್ಮುವನ್ನು ಕಂಡು, ಗಾಬರಿಯಾದ. 'ಗೋಲ್‌ನೊಳಗೆ ಹೊಡೆ' ಎಂಬ ಜನಗಳ ಕೂಗಿನಿಂದ ಧೈರ್ಯಗೆಟ್ಟ. ತನ್ನವರಾರೂ ಸಹಾಯಕ್ಕೆ ಒದಗದಿದ್ದುದನ್ನು ಕಂಡು ಹತಾಶನಾದ. ಹೇಗಾದರೂ, ಗೋಲಿನೊಳಗೆ

ಬರುವ ಚೆಂಡನ್ನು ತಡೆಗಟ್ಟುವೆನೆಂದು ಗೋಲಿನ ಹೊರಗೋಡಿ, ತಮ್ಮು ತುಳಿದ ಚೆಂಡನ್ನು ಕೈಗಳಿಂದ ತಡೆದ. ಚೆಂಡು ಗೋಲಿನ ಮುಂದೆ ನೆಲಕ್ಕೆ ಬಿತ್ತು. ತಮ್ಮು ನೆಲದ ಮೇಲೆ ಬಿದ್ದ ಚೆಂಡನ್ನು ನೋಡಿ, ಯಾರೂ ಇಲ್ಲದ ಗೋಲನ್ನು ನೋಡಿ,—ಆ ಕಾವಲುಗಾರನು ಘಾತವಾಯಿತೆಂದು ಗೋಲೊಳಗೆ ಓಡುವಷ್ಟರಲ್ಲಿ,—ಗೋಲಿನೊಳಗೆ ಮೆಲ್ಲನೆ ತಳ್ಳಿಬಿಟ್ಟನು. ಈಗ ನೋಡಿದರೆ 'ಗೋಲಿನೊಳಗೆ' ಚೆಂಡಿದೆ. ಈಗ ಕಾಲೇಜಿನವರಿಗೆ ಹೀಗೆ ಮತ್ತೊಂದು ಗೋಲಾಗಿದೆ! 'ಗೋಲ್! ಗೋಲ್!' ಎಂಬ ಬೊಬ್ಬೆಯಲ್ಲಿ ಕಾಲೇಜ್ ಟೀಮಿನವರ ಎದೆಯೊಡೆದಿದೆ. ಈಗ ಸ್ಕೂಲ್ ಟೀಮಿನವರ ಸಂಭ್ರಮದ ಹುಚ್ಚಾಟಕ್ಕೆ ಮಿತಿಯೇ ಇಲ್ಲ; ಅವರು ತಮ್ಮುವನ್ನು ಹಣ್ಣುಗಾಯಿ ನೀರುಗಾಯಿ ಮಾಡಿ ಬಿಸಾಡಿದರು.

ಆಟ ಮುಗಿಯಲು ಹೆಚ್ಚು ಹೊತ್ತಿರಲಿಲ್ಲ ಕಾಲೇಜಿನವರು ಗೋಲುಗಳನ್ನು ಹಿಂದಿರುಗಿಸುವುದು ಅಸಾಧ್ಯವೆಂದು ನಿರಾಶರಾಗಿದ್ದರು; ಮತ್ತೂ ಇತ್ತಂಡದವರೂ ದಣಿದಿದ್ದರು. ಆ ಕಾರಣದಿಂದ ಆಟವು ನಿರ್ಜೀವವಾಗಿತ್ತು. ಹೊತ್ತು ಕಳೆಯಲು ಆಡುವಂತೆ ತೋರುತ್ತಿತ್ತು. ಮಿನಿಟು ಮಿನಿಟಿಗೆ ಚೆಂಡು ಆಟದ ಕ್ಷೇತ್ರವನ್ನು ಬಿಟ್ಟು ಹೊರಗೆ ಹೋಗುವುದು;— ಒಳಗೆ ತರುವುದು ಇಷ್ಟೇ ಆಟದ ಸ್ವಾರಸ್ಯವಾಗಿತ್ತು. ಇನ್ನು ಗೋಲು ಆಗುವುದಿಲ್ಲವೆಂದು, ನೋಡಲಿಕ್ಕೆ ಬಂದವರಲ್ಲಿ ಹೆಚ್ಚಿನವರು ಹೊರಟು ಹೋದರು. ಯಥಾಸಮಯದಲ್ಲಿ ಆಟ ಮುಗಿಯಿತು.

ಅನಂತರ, ಡಿ. ಕಲೆಕ್ಟರರ ಪತ್ನಿ ಗೆದ್ದವರಿಗೆ 'ಕಪ್ಪ'ನ್ನು ಕೊಟ್ಟು ಬಹುಮಾನಿಸಿದರು. ಆ ಸಮಯದಲ್ಲಿ ಆಟವನ್ನು ನೋಡಲು ಬಂದ ಅನೇಕ ಮಂದಿ ಉದ್ಯೋಗಸ್ಥರೂ, ವರ್ತಕರೂ ಅಲ್ಲಿ ಹಾಜರಿದ್ದು ಆ 'ಬಹುಮಾನದ ಹಂಚೋಣ'ವನ್ನು ಚೆಂದಗಾಣಿಸಿದರು.

'ಕಪ್ಪ'ನ್ನು ತೆಗೆದುಕೊಂಡು, ಸ್ಕೂಲ್ ಹುಡುಗರ ಮೆರವಣಿಗೆ ವಾದ್ಯಘೋಷದೊಡನೆ ಶಾಲೆಗೆ ಹೊರಟಿತು. ಮುಖ್ಯವಾದ ಬೀದಿಗಳಲ್ಲಿ

ಸಂಚರಿಸಿ ಶಾಲೆಗೆ ಮುಟ್ಟಿತು. ಹೆಡ್ಮಾಸ್ಟರರು ಟೀಮಿನವರನ್ನು ಆದರದಿಂದ ಬರಮಾಡಿಕೊಂಡು, ಅವರಿಗೆ ಸಮಯೋಚಿತವಾದ ಉಪಚಾರದ ನಾಲ್ಕು ಮಾತುಗಳನ್ನು ಹೇಳಿ ಆಶೀರ್ವದಿಸಿದರು.

---

## ಇಪ್ಪತ್ತೊಂಭತ್ತನೆಯ ಅಧ್ಯಾಯ.

### ತಮ್ಮು-ಚಕ್ರಪಾಣಿ.

ಟೂರ್ನಮೆಂಟು ಮುಗಿದು 2—3 ದಿನ ತಮ್ಮು, ರಾಮರಾಯ, ರಾಮಸ್ವಾಮಿ ಮೂವರೂ ಹೊಸ್ಟೆಲ್ ಬಿಟ್ಟು ಹೊರಗೆ ಬರಲಿಲ್ಲ. ಮೈ ಕೈ ನೋವೆಂದು ರಜೆ ಅರ್ಜಿ ಬರೆದು ಹೊಸ್ಟೆಲಲ್ಲಿ ವಿನೋದವಾಗಿ ಕಾಲ ಕಳೆಯುತ್ತಿದ್ದರು. 'ಇಸ್ಪೀಟ್' ಆಟದ ಪರಿಚಯವೀಗ ತಮ್ಮುವಿಗೆ ಈ ಅವಧಿಯಲ್ಲಿ ಹೊಸದಾಗಿ ಆದ ಹಾಗಾಯಿತು. ಹೊಟೆಲಿನ ಪಾನ ಫಲಾಹಾರಗಳಿಗೂ ರಾಮರಾಯ ಸ್ವಲ್ಪ ದುಡ್ಡು ಖರ್ಚು ಮಾಡಿದ. ಪಾನದ ನಡುವೆ ತಮಾಷೆಗೆಂದು ಕೊಂಚ ಬ್ರಾಂದಿಯೂ, ಸೋಡಾದ ಒಟ್ಟಿಗೆ ಬೆರಿಕೆಯಾಗಿತ್ತೇನೋ! ಹಾಗೊಂದು ಸಂಶಯ ತಮ್ಮುವಿಗೆ ಉಂಟಾಗಿತ್ತು. ಸೋಡಾವನ್ನು ಕುಡಿದ ಮೇಲೆ ಆ ತಲೆ ಸುತ್ತುವುದು, ಬುದ್ಧಿಭ್ರಮಣೆ— ಇವೇ ಮೊದಲಾದುವನ್ನು ನೋಡಿ ತಮ್ಮು ಹಾಗೆ ಗ್ರಹಿಸಿದ. ಹೇಗೂ 'ಬ್ರಾಂದಿ' ಎರಡನೆಯ ಬಾರಿ ಅಲ್ಲಿಗೆ ಬರಲಿಲ್ಲ. ರಾಮರಾಯ ತಮ್ಮುವಿನ ಅವಸ್ಥೆಯನ್ನು ನೋಡಿ ಹೆದರಿ, ಮುಂದೆ 'ಬ್ರಾಂದಿ'ಯ ಸಹವಾಸ ಬಿಟ್ಟುಬಿಟ್ಟ.

ಪರೀಕ್ಷೆಗೆ ತರಗತಿಯ ಎಲ್ಲರನ್ನೂ ಕಳುಹಿಸಿದ್ದಾಯಿತು. ಅದರ ಕಾರಣವು ಹೀಗೆಂದು ವರ್ತಮಾನವಿತ್ತು. ಹೈಸ್ಕೂಲಿನ 6ನೆಯ ಫಾರ್ಮಿನಲ್ಲಿ ಧರ್ಮಪುರದ ಜಮೀನ್ದಾರರ ತಮ್ಮ ಓದುತ್ತಿದ್ದ. ಜಮೀನ್ದಾರರು ಆ ಶಾಲೆಯ ಪುಸ್ತಕ ಭಂಡಾರ ಮತ್ತೂ ರಸಾಯನ ಶಾಸ್ತ್ರದ 'ಲೆಬ

ರೇಟರಿಗೆ' 6 ಸಾವಿರದ ಉಚಿತವನ್ನು ಕೊಡುವುದಾಗಿ ವಾಗ್ದಾನ ಮಾಡಿದವರಂತೆ. ಅವರ ತಮ್ಮ, ಪರೀಕ್ಷೆಯ ಪರೀಕ್ಷೆಯಲ್ಲಿ ಪಾಸಾಗುವ ನಿರೀಕ್ಷೆ ಇರಲಿಲ್ಲವಂತೆ. ಆ ಕಾರಣ, ಪರೀಕ್ಷೆಗೆ ಆರಿಸುವುದರ ಗೊಡವೆಯೇ ಬೇಡವೆಂದು ಶಾಲಾಧಿಕಾರಿಗಳು ನಿರ್ಣೈಸಿದ್ದರಂತೆ. ಹೇಗೂ ಪರೀಕ್ಷೆಯ ಪರೀಕ್ಷೆ ಇರಲಿಲ್ಲ. ಎಲ್ಲರಿಗೂ ಅದರಿಂದ ಸುಖವಾಯಿತು. ತಮ್ಮುವಿಗಂತೂ ಊರಿಗೆ ಬಂದ ಮಾರಿ ಹೋದಂತಾಯಿತು.

ಪರೀಕ್ಷೆಗೆ ಕಟ್ಟಬೇಕಾದ ಹಣವನ್ನು ಕಟ್ಟಿದ ಬಳಿಕ, ಹೊಸ್ಟೆಲಿನಲ್ಲಿ ವಿದ್ಯಾರ್ಥಿಗಳಿಗೆ ಹಗಲು ಯಾವುದು, ರಾತ್ರಿ ಯಾವುದೆಂಬುದರ ಭೇದವೇ ತಿಳಿಯದಂತಾಯಿತು. ತಮ್ಮುವೂ, ಅನ್ನನೀರು, ನಿದ್ರೆಗಳ ಗೊಡವೆ ಇಲ್ಲದೆ ಓದಲು ಆರಂಭಿಸಿದ. ರಾಮಸ್ವಾಮಿಯೂ, ರಾಮರಾಯನೂ ಅವನ ಓದಿಗೆ ಈಗ ಅಡ್ಡಿ ಮಾಡುತ್ತಿರಲಿಲ್ಲ.

ಪರೀಕ್ಷೆ ಯಥಾಸಮಯದಲ್ಲಿ ಆಗಿ ಮುಗಿಯಿತು. ಮೂರು ಮಂದಿ ಮಿತ್ರರೂ ಮನೆಗೆ ಹೊರಡುವ ಸಮಯ ಬಂತು. ಬಹಳ ಬೇಸರದಿಂದ ಅವರು ಒಬ್ಬರನ್ನೊಬ್ಬರು ಅಗಲಿದರು. 'ಕಾಗದಪತ್ರಗಳ ಮೂಲಕವಾದರೂ ತಪ್ಪದೆ ಮಾತಾಡಿಕೊಳ್ಳುತ್ತಿರುವ!' ಎಂದು ಅವರವರ ವಿಳಾಸಗಳನ್ನು ತೆಗೆದುಕೊಂಡದ್ದಾಯಿತು. ರಾಮರಾಯನೂ, ರಾಮಸ್ವಾಮಿಯೂ ಪರೀಕ್ಷೆ ಮುಗಿದ ರಾತ್ರಿಯೇ ಅವರವರ ಊರಿಗೆ ಹೊರಟು ಹೋದರು.

ಚಕ್ರಪಾಣಿ ಪರೀಕ್ಷೆ ಮುಗಿದ ಮೂರನೆಯ ದಿನ ತಮ್ಮುವಿನ ಕೊಟ್ಟಡಿಗೆ ಬಂದ. ಎಲ್ಲಿ ಯಾವ ಕರುಳು ಕತ್ತರಿಸುವ ಮಾತಾಡಲು ಅವನು ಬಂದನೋ ಎಂದು ತಮ್ಮುವಿಗೆ ಅಂಜಿಕೆ. ಆದರೆ ವಿನಯದಿಂದ 'ತಮ್ಮು! ನಾನು ಈ ದಿನ ಊರಿಗೆ ಹೊರಡುತ್ತೇನೆ. ನಿನ್ನನ್ನು ಕಂಡು ಹೋಗೋಣವೆಂದು ಕಾದಿದ್ದೆ. ಮೂರು ವರ್ಷಗಳ ಕಾಲ ನಾವು ಒಟ್ಟಿಗೆ ಇದ್ದೆವು. ಇನ್ನು ನಾವು ಒಬ್ಬರನ್ನೊಬ್ಬರು ನೋಡುವುದು ಯಾವಾಗಲೋ! ಮಿತ್ರನೆ! ನನ್ನ ನೆನಪಿರಲಿ!' ಎಂದು ಚಕ್ರಪಾಣಿ ಹೇಳಿದ.

ತಮ್ಮುವಿಗೆ ಸತ್ತ ಹಾಗಾಯಿತು! ತಾನು ಅವನ ವಿಷಯದಲ್ಲಿ ಹೇಗೆ ವರ್ತಿಸಿದ್ದೆನೆಂಬುದು ಅವನಿಗೀಗ ಪಕ್ಕನೆ ನೆನಪಿಗೆ ಬಂತು. ಚಕ್ರಪಾಣಿ ತನ್ನನ್ನು ಹಂಗಿಸಲಿಕ್ಕಾಗಿ ಬಂದವನಲ್ಲ;-ಅದು ಅವನು ಮಾತಿನ ಧ್ವನಿಯಿಂದ ಗೊತ್ತಾಯಿತು. ಚಕ್ರಪಾಣಿಗೆ ಉತ್ತರವಾಗಿ, ಮೆಲ್ಲಗೆ,—

**ತಮ್ಮು:**—'ನಾನು ನಿನ್ನಲ್ಲಿ ಕೇಳಿಕೊಳ್ಳಬೇಕಾದುದೂ ಅದೇ; ನನ್ನ ನೆನಪೂ ನಿನಗೆ ಯಾವಾಗಲೂ ಇರಬೇಕೆಂದು. ಪರೀಕ್ಷೆಯಲ್ಲಿ ನೀನು ಚೆನ್ನಾಗಿ ಮಾಡಿರಬಹುದಲ್ಲವೇ?'

**ಚಕ್ರಪಾಣಿ:**—'ಮಾಡಿದ್ದೇನೆ, ಸಾಧಾರಣ. ಪಾಸಾಗಬಹುದೆಂದು ತೋರುತ್ತದೆ. ಪ್ರಶ್ನಾಪತ್ರಗಳು ಅಷ್ಟೊಂದು ಕಷ್ಟವಲ್ಲ. ತಿದ್ದುವ ರೀತಿ ಮಾತ್ರ ಹೇಗೋ! ನೀನು ಹೇಗೆ ಮಾಡಿದ್ದೀ?'

**ತಮ್ಮು:**—'ಮಾಡಿದ್ದೇನೆ; ತಕ್ಕ ಮಟ್ಟಿಗೆ. ಆದರೆ ಒಂದೆರಡು ವಿಷಯಗಳಲ್ಲಿ ನನಗೆ ಧೈರ್ಯ ಸಾಲದು. ನಾನು ಕ್ರಮವಾಗಿ ಓದಿದ್ದರೆ, ಯಾವುದರಲ್ಲಿಯೂ ಹೆದರಿಕೆ ಇದ್ದಿಲ್ಲ.'

**ಚಕ್ರಪಾಣಿ:**—'ಇನ್ನು ಆ ಕುರಿತು ಚಿಂತಿಸಿ ಫಲವಿಲ್ಲ. ಆದುದು ಆಗಿ ಹೋಯಿತು. ಅವರಿಬ್ಬರ ಸಹವಾಸದಿಂದ ಕೇಡು ತಪ್ಪದೆಂದು ನನಗೆ ಮೊದಲೇ ಗೊತ್ತು. ಆ ಕಾರಣ ನಾನು ನಿನ್ನನ್ನು ಮಾತಾಡಿಸಲು ಕೂಡ ಬಾರದೆ, ಇದುವರೆಗೂ ದೂರದಲ್ಲಿಯೇ ಇದ್ದೆ. ನೀನು ಮನಸ್ಸು ಮಾಡಿದ್ದರೆ 'ಫಸ್ಟ್ ಕ್ಲಾಸಿನಲ್ಲಿ' ಪಾಸಾಗುವ ವಿದ್ಯಾರ್ಥಿ. ಅಂಥವನನ್ನು ಸಹವಾಸವು ಕಡಿಸಿತು. ಹೇಗೂ ನಮ್ಮಿಬ್ಬರನ್ನು ಪಾಸುಮಾಡಿಸಲೆಂದು ನಾನು ದೇವರನ್ನು ಪ್ರಾರ್ಥಿಸುತ್ತೇನೆ.'

ಚಕ್ರಪಾಣಿಯ ನಿರ್ವಂಚನೆಯ, ಅಂತಃಕರಣದ ಮಾತುಗಳನ್ನು ಕೇಳಿ ತಮ್ಮುವಿಗೆ ಮನಸ್ಸು ಕರಗಿತು. ಅವನು 'ಅಣ್ಣಾ! ಚಕ್ರಪಾಣಿ! ನಿನಗೆ ನನ್ನಲ್ಲಿ ಇಷ್ಟು ಪ್ರೇಮವಿದೆ ಎಂದು ನನಗೆ ಗೊತ್ತಿರಲಿಲ್ಲ. ನಾನು ನಕಲೆತ್ತಿದೆನೆಂದು ನೀನು ನನ್ನನ್ನು ಅಂದು ಓರೆ ನೋಟದಿಂದ ನೋಡಿದಾಗ,

ನಾನು ಅದನ್ನು ತಪ್ಪಾಗಿ ಗ್ರಹಿಸಿದ್ದೆ. ಆ ವಿಷಯದಲ್ಲಿ ನಾನು ನಿನ್ನ ಕ್ಷಮೆ ಬೇಡುತ್ತೇನೆ' ಎಂದನು.

**ಚಕ್ರಪಾಣಿ:**—'ನೀನು ತಪ್ಪಾಗಿ ಗ್ರಹಿಸಿದರೂ, ನಾನು ಹಾಗೆ ಗ್ರಹಿಸಿಲ್ಲ. ನೀನು ಸ್ವಭಾವತಃ ಎಂಥವನೆಂಬುದನ್ನು ನಾನು ಬಲ್ಲೆ. ಅಂದು 'ಫೂಟ್ ಬಾಲ್' ಆಟದಲ್ಲಿ ನನಗೆ ಕೇಡು ಉಂಟುಮಾಡಲು ಕಾರಣಭೂತರು ಯಾರೆಂಬುದನ್ನೂ ಬಲ್ಲೆ. ಆದ್ದರಿಂದಲೇ ನಾನು ನಿನ್ನಂಥ ಒಳ್ಳೆಯ ಸ್ನೇಹಿತನನ್ನು ಕಳೆದುಕೊಳ್ಳಬಾರದೆಂದೂ, ತಪ್ಪುಗ್ರಹಿಕೆ ಏನಿದ್ದರೂ ಅದಿಲ್ಲಿಯೇ ಹಾರಿ ಹೋಗಬೇಕೆಂದೂ ನಾನಿಲ್ಲಿಗೆ ಬಂದಿದ್ದೇನೆ.'

'ಫುಟ್ ಬಾಲ್ ಆಟ' ಎಂದೊಡನೆ ತಮ್ಮುವಿನ ಆಳುದ್ದ ಶರೀರ ಗೇಣುದ್ದವಾಯಿತು. ಬೆನ್ನಿಗೆ ಹೊಡೆದರೂ ಬೆಣ್ಣೆ ಕೊಡುವ ಮನಸ್ಸು ಇವನದೆಂದು ತಮ್ಮುವಿಗೆ ಖಚಿತವಾಯಿತು. ಅವನು 'ಒಳ್ಳೆಯದು; ಅಣ್ಣಾ! ಇಂದಿನಿಂದ ನಾವಿಬ್ಬರೂ ಒಂದು ತಾಯ ಮಕ್ಕಳು; ಸೋದರರು. ನಮ್ಮ ಪರಸ್ಪರ ಸೋದರವಾತ್ಸಲ್ಯವನ್ನು ದೇವರು ಹೆಚ್ಚಿಸಲಿ!' ಎಂದನು.

---

## ಇಪ್ಪತ್ತೇಳನೆಯ ಅಧ್ಯಾಯ.

## ಪರೀಕ್ಷೆಯ ಫಲಿತಾಂಶ.

ತಮ್ಮು ಊರಿಗೆ ಬಂದನು. ಪರೀಕ್ಷೆಯಲ್ಲಿ ಪಾಸಾಗಬಹುದೆಂದು ಮನೆಯಲ್ಲಿ ಹೇಳಿದನು;—ಆದರೂ ಪಾಸಾಗಲಾರೆನೆಂಬ ಹೆದರಿಕೆ ಅವನಿಗೆ ಒಳಗಿಂದೊಳಗೆ ಇದ್ದೇ ಇತ್ತು. ಅವನು ಮನೆಯಲ್ಲಿ ಹೆಚ್ಚು ದಿನವಿರಲಿಲ್ಲ. ಸೋದರ ಮಾವನಿದ್ದಲ್ಲಿಗೆ ಹೋದನು.

ಪರೀಕ್ಷೆಯ ಫಲಿತಾಂಶ ತಿಳಿಯುವ ಕಾಲ ಸಮೀಪಿಸಿತು. 'ನನಗೆ ಕಾಗದ ಬರೆಯಬೇಕೆ'ಂದು ತಮ್ಮು ತನ್ನ ಈಗಿನ ವಿಳಾಸವನ್ನು ಕೊಟ್ಟು, ಶಾಲೆಗೆ ಪತ್ರ ಬರೆದಿದ್ದನು. ಅದರಂತೆ ಆ ಊರಿನ ಪೋಸ್ಟಾಫೀಸಿನ ಬಾಗ

ಲಲ್ಲಿ ಮೂರು ಹೊತ್ತು ಕಾದು ಬಿದ್ದಿರುವುದೊಂದೇ ಅವನ ಕೆಲಸವಾಯಿತು. ಮೂರು ದಿನ ಕಾದನು. ಕಾಗದ ಇಲ್ಲ. ತಮ್ಮು ಗಾಬರಿಯಾದ.

'ಒಂದು ವೇಳೆ ನನ್ನ ಕಾಗದ ಇಲ್ಲಿಗೆ ಮುಟ್ಟದೆ ಶ್ರೀರಾಮಪುರಕ್ಕೇನಾದರೂ ಹೋಗಿರಬಹುದೇ?' ಎಂದು ಯೋಚಿಸಿ, ತಮ್ಮು ಕೂಡಲೇ ಶ್ರೀರಾಮಪುರಕ್ಕೆ ಹೊರಟು ಬಂದ. ಬರುವಾಗ ಶಾಸ್ತ್ರಿಗಳು ಮನೆಯಲ್ಲಿ ಇದ್ದರು. ತಮ್ಮುವನ್ನು ನೋಡಿದೊಡನೆ, 'ಹೀಗೆ ಬಾ! ಮಾತಾಡುವ ಕೆಲಸವಿದೆ' ಎಂದರು.

ಇಬ್ಬರೂ ಒಂದು ಕೊಟ್ಟಡಿಯೊಳಗೆ ಹೋದರು:—'ತಮ್ಮು! ನಮ್ಮ ಸಾಹುಕಾರರ 'ತಗಾದೆ' ಬಹಳ ವಿಪರೀತವಾಗುತ್ತಿದೆ. ದಾವಾ ಮಾಡಲು ಹೊರಟಿದ್ದಾರೆ. ನನಗೆ ಅವರ ಬಡ್ಡಿಯನ್ನು ಕೂಡ ಸಲ್ಲಿಸಲು ಈ ಮೂರು ವರ್ಷಗಳಿಂದ ಸಾಧ್ಯವಾಗಿಲ್ಲ. ಹೇಗೂ ನಿನ್ನ ವಿದ್ಯಾಭ್ಯಾಸ ಮುಗಿಯಿತು. ಎಲ್ಲಿಯಾದರೂ ಕೆಲಸಕ್ಕೆ ಸೇರಿಸಿ, ಪ್ರತಿ ತಿಂಗಳ ನಿನ್ನ ಸಂಬಳವನ್ನು ಸಾಲಕ್ಕೂ, ಬಡ್ಡಿಗೂ ಸಲ್ಲಿಸುತ್ತೇನೆ ಎಂದು ಅವರಿಗೆ 2—3 ಸಲ ದಮ್ಮಯ್ಯ ಹಾಕಿದೆ. ಕಾಲು ಹಿಡಿದೆ. ಆದರೂ ಅವರಿಗೆ ಅದೂ ಸಮಾಧಾನವಿಲ್ಲ. ಹಣ ಈಗಲೇ ಏಕಗಂಟನಲ್ಲಿ ತೆರಬೇಕು ಎಂದು ಅವರು ಕೂತಿದ್ದಾರೆ. ಇತ್ತ ನಿನಗಾದರೂ ಸ್ಕೂಲಿನಲ್ಲಿ ಒಂದು ಕೆಲಸಮಾಡಿಸಿ ಕೊಡುವ ಎಂದು ನಿಮ್ಮ ಹೆಡ್ಮಾಸ್ಟರರನ್ನು ಕೇಳಿದುದಕ್ಕೆ, 'ಏನಾದರೂ ಒಂದು ಹತ್ತು ರೂಪಾಯಿನ ಕೆಲಸ ಮಾಡಿಸಿ ಕೊಡುತ್ತೇನೆ, ಶಾಸ್ತ್ರಿಗಳೇ! ಆದರೆ ಪರೀಕ್ಷೆಯ ಫಲಿತಾಂಶ ತಿಳಿಯದೆ ಏನೂ ಮಾಡಲಿಕ್ಕೂ ಉಪಾಯವಿಲ್ಲ; ಅಲ್ಲಿಯ ವರೆಗೆ ಸ್ವಲ್ಪ ತಾಳಿ' ಎಂದು ಇವರು ಹೇಳುತ್ತಾರೆ. ಇವರಿಬ್ಬರ ಮಧ್ಯದಲ್ಲಿ ನಾನು ಕೆಟ್ಟೆ. ನಿನ್ನ ಪರೀಕ್ಷೆಯ ಫಲಿತಾಂಶ ಗೊತ್ತಾಗಬೇಕಾದರೆ ಇನ್ನೂ ಎಷ್ಟು ದಿನಬೇಕು, ತಮ್ಮು?' ಎಂದು ಕೇಳಿದರು.

**ತಮ್ಮು**—'ಎಷ್ಟು ದಿನವೂ ಬೇಡ. ಇಂದು ನಾಳೆಯಲ್ಲಿಯೋ ತಿಳಿಯಬಹುದು. ಅದನ್ನು ತಿಳಿಯಲಿಕ್ಕಾಗಿಯೇ ನಾನೀಗ ಬಂದೆ; ಪೋಸ್ಟಾಫೀಸಿಗೆ ಹೋಗಿ ಬರುತ್ತೇನೆ.'

ಹೀಗೆಂದು ತಮ್ಮು ಪೋಸ್ಟಾಫೀಸಿಗೆ ಹೊರಟ. ಹೋಗುತ್ತಾ 'ನಾನು ಪಾಸೋ, ಫೈಲೋ' ಎಂದು ಕಳವಳಿಸುತ್ತ ಓಡಿದ. ಉತ್ತರದ ಪತ್ರಿಕೆಗಳನ್ನು ತಿದ್ದುವವರು, ಕೈ ತಪ್ಪಿ 15ರ ಬದಲು 51 'ಮಾರ್ಕೆಂದು' ಬರೆದು ನನ್ನನ್ನು ಪಾಸು ಮಾಡಿರಲಾರರೇ? 'ರಿಜಿಸ್ಟ್ರಾರ'ರಾದರೂ 27ನ್ನು 72 'ಮಾರ್ಕ್' ಎಂದು ತಪ್ಪಾಗಿ ಓದಿ ತನ್ನನ್ನು 'ಪಾಸು ಲಿಸ್ಟಿನಲ್ಲಿ' ಸೇರಿಸಿರಲಾರರೇ? ದೇವರಿದ್ದಾನೆ; ನೋಡುವ' ಎನ್ನುತ್ತ ಪೋಸ್ಟಾಫೀಸಿನ ಬಾಗಿಲಿಗೆ ಬಂದ. 'ಕಾಗದ ಉಂಟೇ?' ಎಂದು ವಿಚಾರಿಸಿದ. 'ಟಪಾಲು ಬರಲಿಲ್ಲ'ವೆಂಬ ಉತ್ತರ ಬಂತು. ತಮ್ಮುವಿನ ಕೈಯ್ಯಲ್ಲೊಂದು ಕನ್ನಡ ಮಾಸಪತ್ರಿಕೆ ಇತ್ತು;—'ಸುವಾಸಿನಿ'. ಅವನು ಪೋಸ್ಟಾಫೀಸಿನ ಜಗುಲಿಯ ಮೇಲೆ ಕುಳಿತು ಅದನ್ನು ಬಿಡಿಸಿ ಓದುತ್ತಿದ್ದ. ಗಳಿಗೆಗಳಿಗೆಗೂ ಹೋಗಿ 'ಟಪಾಲು ಬಂತೇ?' ಎಂದು ವಿಚಾರಿಸುತ್ತಿದ್ದ. ಕೊನೆಗೆ ಪೋಸ್ಟ್ ಮಾಸ್ತರರು:—'ಹುಡುಗಾ! ನೀನು ಪದೇ ಪದೇ ಕೇಳುವ ತೊಂದರೆ ತೆಗೆದುಕೊಳ್ಳಬೇಡ. ಟಪಾಲು ಬಂದೊಡನೆ ನಿನ್ನನ್ನು ಕರೆಯುತ್ತೇನೆ' ಎಂದರು.

ತಮ್ಮು ಪುನಃ ಅದೇ ಪುಸ್ತಕವನ್ನು ಬಿಡಿಸಿ ಜಗುಲಿಯ ಮೇಲೆ ಕುಳಿತ. 'ವಿದ್ಯಾರ್ಥಿಯ ಅಪಜಯ'ವೆಂಬ ಈ ಪದ್ಯವನ್ನೋದುತ್ತಿದ್ದ.

### ಪರೀಕ್ಷೆಯಲ್ಲಿ ಪರಾಜಿತನಾದ ವಿದ್ಯಾರ್ಥಿಯ ಪ್ರಲಾಪ.

ಚತುಷ್ಪದಿ.

ಸಾಧ್ಯವಿಲ್ಲವು ಪರೀಕ್ಷೆಯೊಳೆನಗೆ ಜಯವು; ।
ವಿದ್ಯಾಪರೀಕ್ಷಕರಿಗಿಲ್ಲವೈ ದಯವು. ॥

ಆರು ವರ್ಷಗಳಿಂದ ಪೋಗುವೆನು ನಾನು; ।
ದೂರ ಗುಡ್ಡಕೆ ಬರಿದೆ ಮಣ್ಣ ತುಂಬಿದೆನು. ॥
ತೊರಲಿಲ್ಲವು ಪರೀಕ್ಷೆಯೊಳು ಜಯವಿನ್ನು ।
ನೀರೊಳಗೆ ಹೋಮಗೈದಂತಾದುದೇನು? ॥ ೧ ॥

ನೊಸೆಲ ಪೊರೆಯಾಯ್ತು ಸಾರದ ಭಾರ ಚಿಂತೆ, ।
ಹಸಿವು ನೀರಡಿಕೆಯಿರದಾ ವೊಂಟೆಯಂತೆ, ॥

ಉಸುಬೆಂಬ ಜೀವಕಾಲದಿ ನಡೆದು ಮುಂತೆ, ।
ಬಸವಳಿದು ಬರಿದೆ ಸೇರ್ದೆನು ಪರಿಕೆ ಸಂತೆ. ॥ ೨ ॥

ಆಟಗಳ ಬರಿದೆ ನಾನಾಡದೇ ಬಿಟ್ಟು, ।
ಪಾಟದಲಿ ಬಯಲಾಗಿ ಪೂರ್ಣ ಮನವಿಟ್ಟು, ॥
ಮೂಟೆ ಹೊರುವಾ ಎತ್ತಿನೊಲ್ ನಿದ್ದೆಗೆಟ್ಟು, ।
ಓಟವೋಡಿದೆ. ನೋಡಲಿದು ಕಣ್ಣುಕಟ್ಟು! ॥ ೩ ॥

ಹಲವು ಪುಸ್ತಕಗಳನು ಪರರೊಡನೆ ಬೇಡಿ, ।
ಕೆಲವನ್ನು ಕೊಂಡೆನ್ನೈ ಹಣವನು ಬಿಸಾಡಿ, ॥
ಕಲಿತೆನಾನೆಲ್ಲವನು ಪೂರ್ಣಮನವಮಾಡಿ, ।
ಗೆಲಲಿಲ್ಲವಿದು ಪರೀಕ್ಷೆಯ ಮಂತ್ರವೋಡಿ! ॥ ೪ ॥

ಅಷ್ಟರಲ್ಲಿ, ಟಪಾಲು ಬಂತು. ತಮ್ಮುವಿಗೆ ಕಾಗದವೂ ಇತ್ತು. ಪೋಸ್ಟ್ ಮಾಸ್ಟರರು ಕರೆದು ಕೊಟ್ಟರು. ನಡುಗುವ ಕೈಗಳಿಂದ ತಮ್ಮು ಅದನ್ನು ಒಡೆದು ಓದಿದ 'ಫೈಲ್!'

ಪ್ರಪಂಚವೆಲ್ಲ ಕತ್ತಲೆಯಾಯಿತು! ಸೂರ್ಯ ಮುಳುಗುವ ಮೊದಲೇ ಹೊತ್ತು ಹೋಯಿತು; ಜೀವನವು ಶೂನ್ಯವಾಯಿತು. ತಮ್ಮು ಮೈ ಮರೆತ.

ತಮ್ಮು ಸ್ವಲ್ಪ ಹೊತ್ತಿನ ಮೇಲೆ ಚೇತರಿಸಿಕೊಂಡು ಕಾಗದವನ್ನು ಇನ್ನೊಮ್ಮೆ ಓದಿದ. 'ಫೈಲ್' ಎಂಬುದು ಖಂಡಿತವಾಯಿತು ಒಂದು ಪೋಸ್ಟ್ ಕಾರ್ಡನ್ನೂ, ಮಸಿಯನ್ನೂ, ಲೇಖನಿಯನ್ನೂ ಪೋಸ್ಟ್ಮಾಸ್ಟರಿಂದ ತೆಗೆದುಕೊಂಡು, ಮನೆಗೆ ಒಂದು ಕಾಗದ ಬರೆದ:—'ಫಲಿತಾಂಶ ತಿಳಿಯಲು ನಾನು ಶಿವರಾಜಪುರಕ್ಕೆ ಹೋಗಿದ್ದೇನೆ; 8 ದಿನಗಳಲ್ಲಿ ಬರುತ್ತೇನೆ' ಎಂದು. ಕಾಗದವನ್ನು ಪೆಟ್ಟಿಗೆಯಲ್ಲಿ ಹಾಕಿ ಪೋಸ್ಟಾಫೀಸಿನಿಂದ ಹೊರಟ.

---

## ಇಪ್ಪತ್ತೆಂಟನೆಯ ಅಧ್ಯಾಯ.

## ತಮ್ಮುವಿನ ತಿರುಗಾಟ.

ಎರಡು ದಿನಗಳಲ್ಲಿ ಅವನು ರಾಮುರಾಯನ ಮನೆ ಸೇರಿದ. ದಾರಿಯಲ್ಲಿ ಅಲ್ಪ ಸ್ವಲ್ಪ ತಿಂಡಿಯನ್ನು ತಿಂದ; ಹಸಿವೆಯ ಕಾಟಕ್ಕೆ. ಊಟವಿಲ್ಲ; ಊಟಕ್ಕೆ ತಕ್ಕಷ್ಟು ದುಡ್ಡು ಅವನಲ್ಲಿ ಇಲ್ಲ.

'ಫೈಲಾಗಿ ಹೋದೆ. ಈ ಸುಟ್ಟ ಮುಖವನ್ನು ಇನ್ನು ಯಾರಿಗೂ ತೋರಲಾರೆ. ತೋರಿಸಿದರೆ ಅನರ್ಥವಾಗುತ್ತದೆ. ತಂದೆಗೆ ಎದೆಯೊಡೆಯುತ್ತದೆ. ತಾಯಿ ಗೋಳಾಡುತ್ತಾಳೆ. ಹೆಡ್ಮಾಸ್ಟರರು ತಲೆಯ ಮೇಲೆ ಕುಟ್ಟುತ್ತಾರೆ. ಸಾಹುಕಾರರು ದಾವಾ ಹೆಟ್ಟುತ್ತಾರೆ. ಇಷ್ಟೆಲ್ಲ ರಂಪವಾಗುತ್ತದೆ; ಇದಕ್ಕೆ ನಾನಾಗಿ ಏಕೆ ಅವಕಾಶ ಕೊಡಲಿ? ಯಾರಲ್ಲಿಯಾದರೂ ಒಂದಿಷ್ಟು ಸಾಲ ಕೇಳುತ್ತೇನೆ. ಬೊಂಬಯಿಗೆ ಹೋಗುತ್ತೇನೆ. ಅಲ್ಲಿಯೊಂದು ಕೆಲಸವನ್ನು ಸಂಪಾದಿಸುತ್ತೇನೆ. ಆ ಮೇಲೆ ಊರಿಗೆ ಕಾಗದ ಬರೆಯುತ್ತೇನೆ. ತಿಂಗಳು ತಿಂಗಳಿಗೆ ಇಂತಿಷ್ಟು ರೂಪಾಯಿ 'ಮನಿಯಾರ್ಡರ್' ಮಾಡುತ್ತೇನೆಂದು. ಅದರಿಂದ ಮನೆಯವರಿಗೆ ಸ್ವಲ್ಪ ಸಂತೋಷವಾಗುತ್ತದೆ. ಸಾಹುಕಾರರಿಗೂ ಸ್ವಲ್ಪ ಸಮಾಧಾನವಾಗುತ್ತದೆ' ಎಂಬುದೇ ಅವನ ಈಗಿನ ಸಂಕಲ್ಪವಾಗಿತ್ತು.

ತಮ್ಮು ಬರುವಾಗ ರಾಮುರಾಯ ಮನೆಯ ಹೆಬ್ಬಾಗಿಲ ಬಳಿ ನಿಂತಿದ್ದ. ತಮ್ಮುವನ್ನು ನೋಡಿ, 'ಎಲ್ಲಿಂದ ಬಂದೆ? ಯಾವಾಗ ಬಂದೆ?'' ಎಂದು ಆತುರದಿಂದ ಕೇಳಿದ.

ತಮ್ಮು:—'ಇದೇ ಈಗ ಬರುತ್ತಾ ಇದ್ದೇನೆ. ಊರಿನಿಂದಲೇ ಬಂದೆ!'

ರಾಮುರಾಯ:—'ನಾನೂ 'ಫೈಲು'. ನೀನೂ 'ಫೈಲ್!' ಸಂತೋಷ! ಒಬ್ಬರು ಪಾಸಾಗಿ, ಒಬ್ಬರು ಫೈಲಾದರಲ್ಲವೇ ದುಃಖ?'

ತ:—'ಅದು ಹಾಗಿರಲಿ! ನಾನು ನಿನ್ನಲ್ಲಿ ಒಂದು ದೊಡ್ಡ ಕೆಲಸಕ್ಕಾಗಿ ಬಂದೆ. ಒಳಗೆ ಹೋಗೋಣ; ಹೇಳುತ್ತೇನೆ.'

ಇಬ್ಬರೂ ಒಳಗೆ ಹೋದರು. ಬಳಿಕ ತಮ್ಮು ತಾನು ಹೊರಟಿರುವ ಉದ್ದೇಶವನ್ನೂ, ಮನೆಯ ದುರವಸ್ಥೆಯನ್ನೂ ಆತನಿಗೆ ತಿಳಿಸಿ 'ಐದು ರೂಪಾಯಿಗಳನ್ನು ಕೊಟ್ಟಿರು; ಇನ್ನೆರಡು ತಿಂಗಳಲ್ಲಿ ಕಳುಹಿಸುತ್ತೇನೆ' ಎಂದನು.

**ರಾಮರಾಯ:**—'ರೂಪಾಯಿಯೇ? ನನ್ನಲ್ಲಿ ಈಗ ಬಿಡಿಕಾಸೂ ಇಲ್ಲ. ಅಮ್ಮನನ್ನು ಕೇಳಿದರೆ ಅವಳು ಕೊರಕೊರ ಎನ್ನುತ್ತಾಳೆ. ನಮ್ಮ ಅಪ್ಪ ನನ್ನು ಕೇಳು; ನನ್ನ ಹೆಸರು ಹೇಳು. ನೀನು ಬಂದ ಕೆಲಸವಾದೀತು.'

ಹೀಗೆಂದು ರಾಮರಾಯ ತಮ್ಮುವನ್ನು ಕರೆದುಕೊಂಡು ಈಚೆಗೆ ಬಂದ.

ರಾಮರಾಯನ ತಂದೆ ತನಗಾಗಿ ಒಂದು ಪ್ರತ್ಯೇಕವಾದ ಕೊಟ್ಟಡಿ ಯನ್ನು ಕಟ್ಟಿಸಿಕೊಂಡಿದ್ದರು. ಅದು ಮನೆಗೆ ಸೇರಿರಲಿಲ್ಲ. ಆದರೆ ಮನೆಯ 'ಕಂಪೌಂಡಿನೊಳಗೇ' ಇತ್ತು. ರಾಮರಾಯನ ತಂದೆ ಎರಡು ಹೊತ್ತಿನ ಊಟಕ್ಕೆ ಮಾತ್ರ ಮನೆಯೊಳಗೆ ಕಾಲಿಡುತ್ತಿದ್ದರು. ಮಿಕ್ಕ ಸಮಯಗಳ ಲ್ಲೆಲ್ಲ ಅವರಿರುವುದು ಆ ಕೊಟ್ಟಡಿಯಲ್ಲಿಯೇ. ಅದು ಅವರ 'ಆಫೀಸು'. ಆಫೀಸಿನಲ್ಲಿ ಹಣದ 'ಲೇವಾದೇವಿ' ನಡೆಯುವುದು. ಅವರು ಆ ಊರಿನ ಒಬ್ಬ 'ಬೇಂಕರ್'.

ರಾಮರಾಯನು ತಮ್ಮುವನ್ನು ಆಫೀಸಿನ ಬಳಿಗೆ ಕರೆದುಕೊಂಡು ಬಂದು 'ಅದೋ, ನಮ್ಮ ತಂದೆ ಅಲ್ಲಿ ಮಂಚದ ಮೇಲೆ ಕೂತಿದ್ದಾರೆ. ಒಳಗೆ ಹೋಗಿ ಕೇಳು' ಎಂದನು.

**ತಮ್ಮು:**—'ನೀನು ಬರಬಾರದೇ?'

**ರಾಮರಾಯ:**—'ನಮ್ಮ ತಂದೆ ಮನೆಯವರೊಡನೆ ಸಲಿಗೆಯಿಂದಿಲ್ಲ. ಈ ಜೀವಮಾನದಲ್ಲಿ ಅವರು ನನ್ನೊಡನೆಯೂ, ತಾಯಿಯೊನೆಯೂ ಆಡಿದ ಮಾತುಗಳನ್ನು ಇಷ್ಟೇ ಎಂದು ಲೆಕ್ಕಮಾಡಿ ಹೇಳಬಹುದು. ನಾನು ನಿನ್ನನ್ನು ಕರೆತಂದೆನೆಂದಾದರೆ ನಿನ್ನ ಕೆಲಸಕೆಡಬಹುದು. ನೀನೇ ಹೋಗು!'

ತಮ್ಮು ಸಂಕೋಚದಿಂದ ಕೊಟ್ಟಡಿಯೊಳಗೆ ಹೋದ. ರಾಮರಾಯನ ತಂದೆ ಶ್ಯಾನುಭೋಗರೊಡನೆ ಏನೋ ಹೇಳುತ್ತ ಲೆಕ್ಕವನ್ನು ಬರೆಯಿಸುತ್ತಿದ್ದರು. ಸಾಮಾನ್ಯವಾಗಿ 'ಲೇವಾದೇವಿ'ಗೆ ಬರುವ ಅನೇಕ ಮಂದಿಗೆ ಲೆಕ್ಕಾಚಾರ, ಅದರಲ್ಲಿಯೂ ಬಡ್ಡಿಯ ಲೆಕ್ಕಾಚಾರ ತಿಳಿಯದು. ಆದ್ದರಿಂದ ಹೇಳಿದಷ್ಟು ತೆರುವರು. ಆ ಬಡ್ಡಿಯ ಕುರಿತಾಗಿಯೇ ಏನೋ ಅವರು ಹೇಳುತ್ತಿದ್ದರು. 'ಶ್ಯಾಮರಾಯರ ಬಡ್ಡಿ' ಎಂದರೆ ಊರಲ್ಲಿ ಹೆಸರಾಗಿತ್ತು. ಕೆಲವು ವೇಳೆ ಅಸಲಿಗಿಂತಲೂ ಬಡ್ಡಿ ಹೆಚ್ಚಾಗುವುದಿತ್ತು. ಚರ್ಚೆಗೆ ಬಂದರೆ 'ಕೈತಪ್ಪು' ಎಂದಾಗುವುದಿತ್ತು.

ತಮ್ಮುವನ್ನು ನೋಡಿ 'ಯಾರು? ಎಲ್ಲಿಯವರು?' ಎಂದು ರಾಮರಾಯನ ತಂದೆ ಕೇಳಿದರು.

**ತಮ್ಮು:**—'ನಾನು; ರಾಮರಾಯನ ತರಗತಿಯಲ್ಲಿ ಓದುವವ.'

**ಶ್ಯಾಮರಾಯ:**—'ಆಗಲಿ; ಇಲ್ಲಿಗೆ ಬಂದುದೇನು?'

**ತ:**—'ಸ್ವಲ್ಪ ಸಾ—ಲ ಬೇಕಾಗಿದೆ.'

**ಶ್ಯಾ:**—'ಕೈಯ್ಯಲ್ಲಿ ಏನಿದೆ?'

**ತ:**—'ಏನೂ ಇಲ್ಲ.'

**ಶ್ಯಾ:**—'ಉಂಗುರವಿದೆಯೇ?'

**ತ:**—'ಇಲ್ಲ!'

**ಶ್ಯಾ:**—'ಒಂಟಿ ಇದೆಯೇ?'

**ತ:**—'ಇಲ್ಲ '

**ಶ್ಯಾ:**—'ಕೊನೆಗೆ ಸೊಂಟದಲ್ಲಿ ಒಂದು ಬೆಳ್ಳಿಯ ನೂಲು?'

**ತ:**—'ಇಲ್ಲ.'

**ಶ್ಯಾ:**—'ಹಾಗಾದರೆ ನಮ್ಮಲ್ಲಿ ಸಾಲ ಹುಟ್ಟದು. ಹೋಗಬಹುದು.'

ತಮ್ಮು ಜೋಲುಮುಖ ಹಾಕಿಕೊಂಡು ಹೊರಗೆ ಬಂದ. ರಾಮ ರಾಯನೊಡನೆ ನಡೆದ ಸಂಗತಿಗಳನ್ನು ಹೇಳಿದ. ರಾಮರಾಯನಿಗೆ ಬಹಳ ವ್ಯಸನವಾಯಿತು. ತಾಯ ಬಳಿಗೆ ಹೋಗಿ ಬಹಳ ಪೀಡಿಸಿದ. ಪ್ರಾಣ ಹಿಂಸೆ ಮಾಡಿದ. ಕೊನೆಗೆ ಆಕೆ 'ಅಪ್ಪಾ! ನನ್ನ ಹತ್ತಿರ ಎರಡು ರೂಪಾ ಯಿಗಳಿರಬೇಕು; ಆ ಹುಡುಗನಿಗೆ ಕೊಟ್ಟು ಕಳುಹಿಸು' ಎಂದಳು. ಆ ಪ್ರಕಾರ ರಾಮರಾಯ ತಮ್ಮುವಿಗೆ 2 ರೂಪಾಯಿ ಕೊಟ್ಟ. 'ಊಟ ಮಾಡಿಕೊಂಡು ಹೋಗು!' ಎಂದು ತಮ್ಮುವನ್ನು ಬಲಾತ್ಕರಿಸಿದ. 'ಊಟ ಕ್ಕೇನು? ಇನ್ನೊಮ್ಮೆ ಬರುತ್ತೇನೆ. ಈಗ ಒತ್ತಾಯ ಮಾಡಬೇಡ. ಊಟ, ನಿದ್ರೆ ಒಂದೂ ಬೇಡವಾಗಿದೆ. ತಲೆ ಕೆಟ್ಟಿದೆ' ಎಂದು ಹೇಳಿ ಹೊರಟೇ ಬಿಟ್ಟ ತಮ್ಮು.

ಹೊರಟು ಸ್ವಲ್ಪ ದೂರ ಬರುವಷ್ಟರಲ್ಲಿ ಯಾರೋ ಅವನನ್ನು ಕೂಗಿ ದರು. ತಮ್ಮು ಹಿಂತಿರುಗಿ ನೋಡಿದ. 'ಚಕ್ರಪಾಣಿ!'

**ತಮ್ಮು**:—'ಚಕ್ರಪಾಣಿ! ಯಾವಾಗ ಇಲ್ಲಿಗೆ ಬಂದೆ?'—ಎಂದು ಅವನು ಸಮೀಪಕ್ಕೆ ಬಂದ ಬಳಿಕ ಕೇಳಿದ.

**ಚಕ್ರಪಾಣಿ**:—'ನಿನ್ನೆ ಬಂದೆ. ನೀನು ಫೈಲಾದೆ ಎಂದು ಕೇಳಿದೆ; ಅನ್ಯಾಯವಾಯಿತು.'

**ತ**:—'ನೀನೋ?'

**ಚ**:—'ಪಾಸು; ಫಸ್ಟ್ ಕ್ಲಾಸಿನಲ್ಲಿ!'

**ತ**:—'ಸಂತೋಷ! ಸಂತೋಷ! ನನ್ನ ಅವಸ್ಥೆ ನೋಡು. ಮನೆ ಬಿಟ್ಟು ಅಲೆಯುತ್ತಿದ್ದೇನೆ.'

**ಚ**:—'ಏಕೆ? ಅಂಥಾದ್ದೇನು?'

ತಮ್ಮು ತನ್ನ ಉದ್ದೇಶವನ್ನೂ, ಕಷ್ಟ ಸುಖಗಳನ್ನೂ ಹೇಳಿಕೊಂಡ. ಇಲ್ಲಿಗೆ ಬಂದ ಕೆಲಸವನ್ನೂ ತಿಳಿದ.

'ಹಾಗಾದರೆ! ಇದೋ! ನನ್ನಲ್ಲಿ ಸ್ವಲ್ಪ ಹಣವಿದೆ. ತೆಗೆದುಕೋ! ದಾಕ್ಷಿಣ್ಯಪಟ್ಟುಕೊಳ್ಳಬೇಡ. ಬೊಂಬಾಯಿಗೆ ಹೋಗಬೇಕಾದರೆ ಐದು

ರೂಪಾಯಿ ಸಾಲದು. 2–3 ರೂಪಾಯಿಗಳು ಹೆಚ್ಚಿಗೆ ಇರಲಿ!' ಎಂದು 6–7 ರೂಪಾಯಿಗಳನ್ನು ತಮ್ಮುವಿನ ಜೇಬಿಗೆ ಚಕ್ರಪಾಣಿ ಒತ್ತಾಯದಿಂದ ತುರುಕಿದ. 'ಒಳ್ಳೆಯ ಸಮಯದಲ್ಲಿ ನೀನು ನನಗೆ ಸಿಕ್ಕಿದೆ. ಕಷ್ಟ ಕಾಲದಲ್ಲಿ ಸಹಾಯಮಾಡಿದೆ. ನಿನ್ನ ಉಪಕಾರವನ್ನು ಮರೆಯುವಂತಿಲ್ಲ; ದೇವರು ನಿನಗೆ ಒಳ್ಳೇದು ಮಾಡಲಿ. ಈ ಉಪಕಾರವನ್ನು ಇನ್ನು ನಾನು ಹೇಗೆ ತೀರಿಸಬಲ್ಲೆನೋ' ಎನ್ನುತ್ತ ಚಕ್ರಪಾಣಿಯು ಅಪ್ಪಣೆ ಪಡೆದು ತಮ್ಮು ಅಲ್ಲಿಂದ ಹೊರಟ.

---

## ಇಪ್ಪತ್ತೊಂಭತ್ತನೆಯ ಅಧ್ಯಾಯ.

### ಬೊಂಬಯಿ.

ತಮ್ಮು 2–3 ದಿನಗಳ ಪ್ರಯಾಣದಲ್ಲಿ ಹಾಗೂ ಹೀಗೂ ಬೊಂಬಯಿ ಸ್ಟೇಶನಿಗೆ ಬಂದು ಇಳಿದಿದ್ದಾನೆ. ಅವನೆಂದೂ ರೈಲು ಹತ್ತಿದವನಲ್ಲ; ಬೊಂಬಯಿ ನಗರದ ರೈಲ್ವೇ ಸ್ಟೇಶನಿನಷ್ಟು ದೊಡ್ಡ ಕಟ್ಟಡವನ್ನು ಎಂದೂ ನೋಡಿದವನಲ್ಲ. ಅವನು ಇಳಿದವನೇ ಅರಮನೆಯಂಥ ಆ ಕಟ್ಟಡವನ್ನು ಕಂಡು ಭ್ರಾಂತನಾಗಿ ನಿಂತಿದ್ದಾನೆ. ಅವನಿಗೆ ಎಲ್ಲಿಗೆ ಹೋಗಬೇಕೆಂದು ಗೊತ್ತಿಲ್ಲ. ಯಾವ ಮಾರ್ಗದಲ್ಲಿ ಹೋಗಬೇಕೆಂದು ಗೊತ್ತಿಲ್ಲ. ಕಣ್ಣು ಕಟ್ಟಿ ಕಾಡಿಗೆ ಬಿಟ್ಟಂತೆ ಆಗಿದೆ ತಮ್ಮುವಿಗೆ! ತಮ್ಮು ಒಬ್ಬಿಬ್ಬರೊಡನೆ ವಿಚಾರಿಸಿದ. ಅವರೂ ಏನೋ ಹೇಳಿದರು. ಅವನ ಭಾಷೆ ಅವರಿಗೆ ಬರದು. ಅವರದು ಇವನಿಗೆ ತಿಳಿಯದು. ಕೊನೆಗೆ ಯಾರೋ ಒಬ್ಬ ನೊಡನೆ ಇಂಗ್ಲಿಷಿನಲ್ಲಿ ಕೇಳಿ, ಸ್ಟೇಷನಿನಿಂದ ಹೊರಗೆ ದಾಟುವ ದಾರಿ ಯನ್ನು ತಿಳಿದುಕೊಂಡ. ಹೊರಗೆ ಬಂದ. ಬರುವಾಗ ಅಲ್ಲಿ ವಾಹನಗಳು ಸಿದ್ಧವಾಗಿಯೇ ಇವೆ. ಅವುಗಳ ಮಾಲಕರು ಬಂದು ತಮ್ಮುವನ್ನು ಬಹಳವಾಗಿ ವಿಚಾರಿಸಿಕೊಂಡರು. ತಮ್ಮು ಯಾರಿಗೂ ಉತ್ತರ ಹೇಳಲಿಲ್ಲ. ಸುಮ್ಮನೆ ನಡೆದ.

ಬೊಂಬಾಯಿ! ಅದರ ಹೆಸರನ್ನು ತಮ್ಮು ಓದಿದ್ದ; ಕೇಳಿದ್ದ. ಅದನ್ನೀಗ ಪ್ರತ್ಯಕ್ಷವಾಗಿ ಕಂಡ ಹಾಗಾಯಿತು. ಅದೇನು ನಗರ! ಏನು ಕಟ್ಟಡ! ಏನು ಬೀದಿ! ಏನು ಟ್ರಾಮ್‌ಕಾರ್! ಏನು ಮೋಟರ್ ಕಾರ್! ತಮ್ಮು ನೋಡುತ್ತ, ನೋಡುತ್ತ ಹಾಗೇ ಹೋಗುತ್ತಿದ್ದಾನೆ. 10 ಗಂಟೆ ಬಡಿಯಿತು. ಅಷ್ಟು ಹೊತ್ತಿಗೆ ತಮ್ಮು ಒಂದು ಆಫೀಸಿನ ಹತ್ತಿರವಿದ್ದ. 'ಇನ್ಶೂರೆನ್ಸ್ ಆಫೀಸ್' ಎಂದು ಬೋರ್ಡು ಹಾಕಿತ್ತು. ತಮ್ಮು ಮೆಲ್ಲಗೆ ಆಫೀಸಿನ ಒಳಗೆ ಹೊಕ್ಕ. ಯಾರೋ ಒಬ್ಬರು ಮೇಜಿನ ಮೇಲೆ ಬರೆಯುತ್ತಾ ಕುಳಿತಿದ್ದರು. ಏನೋ ಅಂಕೆಗಳನ್ನು ಕೂಡಿಸುತ್ತಾ ಇದ್ದರು. ತಮ್ಮು ಒಳಗೆ ಕಾಲಿಟ್ಟೊಡನೆ ಅವನನ್ನು ಒಮ್ಮೆ ತಲೆಯೆತ್ತಿ ನೋಡಿದರು; ಪುನಃ ಕೂಡಿಸಲಿಕ್ಕೆ ಆರಂಭಿಸಿದರು. ತಮ್ಮು ಮೆಲ್ಲನೆ 'ತಮಗೆ ಕ್ಲಾರ್ಕ್ ಬೇಕೆ?' ಎಂದು ಕೇಳಿದನು.

ಅವನು 'ಬೇಡ'ವೆಂದು ತಲೆಯಲ್ಲಾಡಿಸಿದನು. ತನ್ನ ಕೆಲಸಕ್ಕೆ ತೊಂದರೆ ಮಾಡಕೂಡದೆಂದು ಸಂಜ್ಞೆ ಮಾಡಿದನು. ತಮ್ಮು 'ನನ್ನ ಅದೃಷ್ಟ!' ಎನ್ನುತ್ತ ಕೆಳಗಿಳಿದನು.

ಪಕ್ಕದ ಕಟ್ಟಡವು ಅದೊಂದು 'ಬೇಂಕ್'. 'ಬೇಂಕ್' ಎಂದು ದೊಡ್ಡ 'ಬೋರ್ಡ್' ಹಾಕಿತ್ತು. ತಮ್ಮು ಅಲ್ಲಿಗೆ ನುಗ್ಗಿದ. ಕಾವಲಿದ್ದ ಜವಾನನೊಡನೆ 'ನಿಮ್ಮ ಯಜಮಾನರೆಲ್ಲಿ? ಅವರೊಡನೆ ಈಗ ಮಾತಾಡ ಬಹುದೇ?' ಎಂದು ಕೇಳಿದ. ಮಾತಾಡಬಹುದೆಂದೂ, ಯಜಮಾನರು ಮಾಳಿಗೆಯ ಮೇಲಿರುವರೆಂದೂ ಅವನು ಹೇಳಿದ ಬಳಿಕ ತಮ್ಮು ಸರಸರನೆ ಮಾಳಿಗೆ ಹತ್ತಿದ. ಯಜಮಾನನು ಒಂದು ಕೊಟ್ಟಡಿಯಲ್ಲಿ ಪತ್ರಿಕೆಯನ್ನು ಓದುತ್ತ ಕುಳಿತಿದ್ದ. ತಮ್ಮು ಕೊಟ್ಟಡಿಯ ಬಾಗಿಲಲ್ಲಿ ನಿಂತು ಮೆಲ್ಲಗೆ, 'ಗುಡ್ ಮಾರ್ನಿಂಗ್, ಸರ್!' ಎಂದ.

ಪತ್ರಿಕೆಯನ್ನು ಕೆಳಗಿಟ್ಟು, ಯಜಮಾನನು 'ಗುಡ್ ಮೋರ್ನಿಂಗ್! ನಿನಗೆ ಏನು ಬೇಕು?' ಎಂದು ಕೇಳಿದ.

ತಮ್ಮು 'ತಮಗೆ ಕ್ಲಾರ್ಕ್ .......' ಎನ್ನುವಷ್ಟರಲ್ಲಿ, ಯಜಮಾನನು ಕೊಂಚ ರೇಗಿ, 'ಹೊರಡು, ಇಲ್ಲಿಂದ!' ಎಂದ.

ತಮ್ಮು ಎರಡು ಹೆಜ್ಜೆ ಹಿಂದೆ ಸರಿದು, ಪುನಃ 'ಕ್ಲಾರ್ಕ್—ಬೇಕೇ?' ಎಂದು ಕೇಳಿದ. ಯಜಮಾನನು ಎದ್ದು ನಿಂತು, 'ನಡೆಯುತ್ತೀಯಾ ಹೊರಗೆ? ಅಲ್ಲ, ಮಾಳಿಗೆಯಿಂದ ನೂಕಬೇಕೇ ಕೆಳಗೆ?' ಎಂದು ಗರ್ಜಿಸಿದ.

ತಮ್ಮು ಇನ್ನು ಇಲ್ಲಿ ಪರಿಣಾಮವಿಲ್ಲವೆಂದು ಬೀದಿಗೆ ಬಂದು, ಮಧ್ಯಾಹ್ನದ ವರೆಗೂ ಬೀದಿಬೀದಿಗಳಲ್ಲಿ ಅಲೆದ. ಮಧ್ಯದಲ್ಲಿ ಒಂದು ಕಾಫಿ ಹೋಟೆಲಿನಲ್ಲಿ ಒಂದಿಷ್ಟು ಕಾಫಿ ಕುಡಿದ;—ಅಲ್ಲಿಗೆ ಅವನಲ್ಲಿದ್ದ ದುಡ್ಡೆಲ್ಲ ಪೂರೈಸಿ ಹೋಯಿತು. ಮುಖ ಸಣ್ಣದು ಮಾಡಿಕೊಂಡು ಪುನಃ ಹೊರಟ. ಕತ್ತಲೆಯ ವರೆಗೂ ಎಲ್ಲೆಲ್ಲಿಯೋ ತಿರುಗಿದ. ಇಷ್ಟರಲ್ಲಿ ಕುಟ್ಟಿತು ಒಂದು ಮಳೆ. ಎಂಥಾ ಮಳೆ! ಆಕಾಶದಲ್ಲಿ ಎಲ್ಲಿಯೋ ತೂತು ಬಿದ್ದ ಹಾಗೆ ಉತ್ಪಾತ ಮಳೆ; ಒಂದೊಂದು ಹನಿ ನೆಲ್ಲಿಕಾಯಿ ಗಾತ್ರ. ಸ್ವಲ್ಪ ಹೊತ್ತಿನಲ್ಲಿಯೇ ರಸ್ತೆಗಳ ಮೇಲೆಲ್ಲಾ ನೀರು ತುಂಬಿತು. ಬಲವಾದ ಗಾಳಿ ಎದ್ದಿತು. ಪಾಪ! ತಮ್ಮು ಈ ಮಳೆ, ಗಾಳಿಗಳಿಂದ ಚಳಿ ಹಿಡಿದು, ಗಡಗಡನೆ ನಡುಗುತ್ತಾ, ಅಲ್ಲೆಲ್ಲಿಯೋ ಒಂದು ಕಟ್ಟಡದ ಜಗುಲಿಯಲ್ಲಿ ಬೆಳಗು ಮಾಡಿದ.

ಬೆಳಗ್ಗೆ ಎಂಟು ಗಂಟೆಯ ಹೊತ್ತು. ತಮ್ಮು ಒಂದು ಬೀದಿಯಲ್ಲಿ ಹೋಗುತ್ತಿದ್ದಾನೆ. ಎಲ್ಲಿ ಏನು ಬೋರ್ಡು ಹಾಕಿದೆ ಎಂದು ಬೆನ್ನಿನಲ್ಲಿಯೂ ಕಣ್ಣು ಮಾಡಿಕೊಂಡು ನೋಡುತ್ತಾ ನಡೆಯುತ್ತಿದ್ದಾನೆ. ಅಕಸ್ಮಾತ್ತಾಗಿ, ಒಂದು ಕಟ್ಟಡದಲ್ಲಿ ತೂಗು ಹಾಕಿದ್ದ ಒಂದು ಬೋರ್ಡು ಅವನ ಕಣ್ಣಿಗೆ ಬಿತ್ತು. ಆ ಬೋರ್ಡಿನಲ್ಲಿ 'ಕೆಲಸಕ್ಕೆ ಬೇಕು;—ಹುಡುಗರು!' ಎಂದು ಬರೆದಿತ್ತು.

'ಕೆಲಸಕ್ಕೆ ಬೇಕು. ಅದೂ ಹುಡುಗರು!' ಎನ್ನುತ್ತ ತಮ್ಮು ಸಂತೋಷ ದಿಂದ ಒಂದು ಮಾರುದ್ದ ಏರಿದ. ಮೊಳ ಉದ್ದ ಹೆಜ್ಜೆ ಹಾಕುತ್ತ, ಅರ್ಧ ನಿಮಿಷದಲ್ಲಿ ಕಟ್ಟಡದೊಳಗೆ ಬಂದ. ಅಲ್ಲಿಯೊಬ್ಬ ಕುರ್ಚಿಯ ಮೇಲೆ

ಕುಳಿತಿದ್ದ. ಯಜಮಾನ. ಅವನು ಆ ಕಟ್ಟಡದ ಒಳಭಾಗದಲ್ಲಿ ಇನ್ನೊಂದು ಕಟ್ಟಡ ಕಟ್ಟಿಸುತ್ತಿದ್ದ.

ತಮ್ಮು ಒಳಗೆ ಬಂದವನೇ 'ಸ್ವಾಮಿ!-ಸ್ವಾಮಿ! ತಮಗೆ-ತಮಗೆ-ಕೆಲಸಕ್ಕೆ—ಕೆಲಸಕ್ಕೆ ಹುಡುಗರು—ಹುಡುಗರು-ಬೇಕು — ಬೇಕೆಂದು ತಿಳಿದೆ. ನನ್ನನ್ನು ಕೆಲಸಕ್ಕೆ ನೇಮಿಸುವಿರಾ?' ಎಂದು ಆತುರದಿಂದ ಯಜಮಾನನನ್ನು ಕನ್ನಡ ಮಾತಿನಲ್ಲಿಯೇ ಕೇಳಿದ. ಅಂಥಾ ಅತ್ಯಾತುರ!

ಯಜಮಾನನಿಗೆ ಕನ್ನಡ ಬಾರದು. ಅವನಿಗೆ ಇವನೆಂದುದೇನೆಂದು ತಿಳಿಯಲಿಲ್ಲ. ಅವನು ತಮ್ಮುವನ್ನು ತಲೆಯಿಂದ ಪಾದದ ವರೆಗೂ ಒಮ್ಮೆ ಚೆನ್ನಾಗಿ ನೋಡಿದ. ಇವನು ಕೂಲಿಯ ಹುಡುಗನಾಗಿ ತೋರಲಿಲ್ಲ. ಆದರೆ ಆ ಕೆಲಸಕ್ಕಾಗಿ ಬಂದಿದ್ದರೆ ಹಿಂದೆ ಏಕೆ ಕಳುಹಬೇಕೆಂದು ಯೋಚಿಸಿ, ಸಮೀಪದಲ್ಲಿದ್ದ ತನ್ನ ಗುಮಾಸ್ತನನ್ನು ಕರೆದು 'ಹೇಳು, ಇವನಿಗೆ. ಕೆಲಸಕ್ಕಾಗಿ ಬಂದಿದ್ದರೆ ಮಾಡಲಿ! ಇಟ್ಟಿಗೆ ಹೊರುವುದು ಇವನಿಂದ ಆದೀತೇ? ಆದೀತಾದರೆ ದಿನಗೂಲಿ ಮೂರಾಣೆಯುಂಟು' ಎಂದು ಇಂಗ್ಲೀಷಿನಲ್ಲಿ ಹೇಳಿದ. ಗುಮಾಸ್ತ ಅದನ್ನೇ ಹಿಂದುಸ್ಥಾನಿಯಲ್ಲಿ ತಮ್ಮುವಿಗೆ ತಿಳಿಸಿದ. ತಮ್ಮುವಿಗೆ ಇಂಗ್ಲೀಷ್ ಬರುತ್ತಿದೆ ಎಂದು ಅವರಿಬ್ಬರಿಗೂ ಗೊತ್ತಿಲ್ಲ.

ಗುಮಾಸ್ತನೊಡನೆ ಯಜಮಾನ ಹೇಳುವಾಗಲೇ ಕೆಲಸವೇನೆಂದೂ, ಸಂಬಳವೆಷ್ಟೆಂದೂ ತಮ್ಮುವಿಗೆ ತಿಳಿದು ಹೋಗಿದ್ದಿತು. ಆ ಕಾರಣ ತಮ್ಮು ಗುಮಾಸ್ತನ ಮಾತಿನಲ್ಲಿ ಲಕ್ಷ್ಯವಿಡಲಿಲ್ಲ. ಅವನು ಆಗ ಯೋಚಿಸುತ್ತಾ ಇದ್ದ. 'ಮೆಟ್ರಿಕ್! ಮೂರಾಣೆ! ಮಣ್ಣು ಹೊರುವುದು' ಎಂದು ತನ್ನ ದುರಾದೃಷ್ಟವನ್ನು ನೆನಸಿ ದುಃಖಪಡುತ್ತಾ ಇದ್ದ. ಆದರೆ ಇದು ದುಃಖಿಸುತ್ತ ಕುಳ್ಳಿರುವ ಸಮಯವೇ? ಅಲ್ಲ! ಈ ಕೆಲಸವನ್ನು ಬಿಟ್ಟರೆ ಬೇರೆ ಕೆಲಸ ಇಲ್ಲ; ಮೂರಾಣೆಯೂ ಇಲ್ಲ. ಕೇವಲ ಉಪವಾಸವೇ ಗತಿ.

'ಆದುದಾಗಲಿ! ಇದೇ ಕೆಲಸವೇ ಇರಲಿ.' ಎಂದು ತಮ್ಮು ಕೊನೆಗೆ ನಿರ್ಧರಿಸಿದ. ಕೆಲಸ ಮಾಡುತ್ತೇನೆಂದು ಒಪ್ಪಿ ತಲೆಯಾಡಿಸಿದ. ಅವನು ಆ ಹರುಕು ಜುಬ್ಬವನ್ನು ತೆಗೆದು ಆಚೆಗೆ ಒಗೆದ. ಗಂಡು ಕಚ್ಚೆ ಕಟ್ಟಿದ.

'ಫುಟ್ ಬಾಲ್' ಆಡಲಿಕ್ಕೆ ಹೊರಟಂತೆ ಕೆಲಸಕ್ಕೆ ಇಳಿದ. ಚುರುಕಾಗಿ ಕೆಲಸ ಮಾಡಲು ಆರಂಭಿಸಿದ. ಯಜಮಾನನು ಕೂತಲ್ಲಿಂದ ಇದನ್ನೆಲ್ಲ ನೋಡುತ್ತಲೇ ಇದ್ದ. ಚುರುಕಾದ ಹುಡುಗ ಸಿಕ್ಕಿದನೆಂದು ಅವನಿಗೆ ಬಹಳ ಸಂತೋಷವಾಯಿತು.

ತಮ್ಮು ದಿನವೆಲ್ಲ ದುಡಿದ. ಒರಟರಾದ, ಶೊಬಚರಾದ ಆ ಕೂಲಿ ಯವರೊಡನೆ ದುಡಿದ. ಅವನ ಹಿಂದಿನ ಜತೆಗಾರರೆಲ್ಲಿ! ಇಂದಿನವರೆಲ್ಲಿ! ಆದರೂ 'ಏನೂ ಕೆಲಸವಿಲ್ಲದಿರುವ ಬದಲು ಇದಾದರೂ ಒಂದು ಕೆಲಸ; ಬೇಡುವ ಬದಲು ಮಣ್ಣು ಹೊರುವ ಕೆಲಸ' ಎನ್ನುತ್ತ ಕಷ್ಟಪಟ್ಟು ಕೆಲಸ ಮಾಡಿದ. ಅಂದು ಸಂಜೆ ಅವನಿಗೆ ಮೂರು ಆಣೆ ಸಿಕ್ಕಿತು. ಅವನ ಹೆಸರು 'ಕಾಯಂ ಕೂಲಿ'ಯಾಗಿ ಪುಸ್ತಕದಲ್ಲಿ ದಾಖಲಾಯಿತು.

'ಮೆಟ್ರಿಕ್ಯುಲೇಶನ್—ಮಣ್ಣು ಹೊರುವುದು—ಮೂರು ಆಣೆ' ಎಂದು ತನ್ನೊಳಗೆ ಹೇಳಿಕೊಳ್ಳುತ್ತ, ಒಮ್ಮೊಮ್ಮೆ ನಗುತ್ತ, ತಮ್ಮು ಅಲ್ಲಿಂದ ಹೊರಟ. ಎಲ್ಲಿಯೋ ಬಂದಿಷ್ಟು ಫಲಾಹಾರ ಮಾಡಿ ಒಂದು ಜಗುಲಿಯ ಮೇಲೆ ಮಲಗಿದ. ಬೆಳಿಗ್ಗೆ ಏಳುವಾಗ ಪಾಪ, ಮೈ ಕೈ ವಿಪರೀತ ನೋವು! ತಮ್ಮು ಪಾಪ, ಎಂದಾದರೂ ಇಟ್ಟಿಗೆ ಹೊತ್ತವನೇ?

---

## ಮೂವತ್ತನೆಯ ಅಧ್ಯಾಯ.

### ತಮ್ಮು ಈಗ ಯಾರು?

ಕಟ್ಟಡವನ್ನು ಕಟ್ಟಿಸುತ್ತಿದ್ದವನು, ಬೊಂಬಾಯಿ ನಗರದ ಒಬ್ಬ ವಸ್ತ್ರದ ವ್ಯಾಪಾರಿ. ಅವನ ವಸ್ತ್ರದ ಅಂಗಡಿಯು ಈ ಕಟ್ಟಡದಿಂದ ಸ್ವಲ್ಪ ದೂರ ದಲ್ಲಿ ಇತ್ತು. ಅವನು ವಸ್ತ್ರಗಳನ್ನು ಶೇಖರಿಸಿ ಇಡಲು ಈ ಕಟ್ಟಡವನ್ನು ಕಟ್ಟಿಸುತ್ತಿದ್ದನು. ಅವನು ಮೇಲ್ವಿಚಾರಕ್ಕಾಗಿ ಪ್ರತಿನಿತ್ಯವೂ ಇಲ್ಲಿಗೆ ಬಂದು ಹೋಗುತ್ತಿದ್ದನು.

ಒಂದು ದಿನ ಅವನು ಎಂದಿನಂತೆ ಇಲ್ಲಿಗೆ ಬಂದಿದ್ದಾನೆ. ಕಟ್ಟಡದ ಕೆಲಸದ ಮೇಲ್ವಿಚಾರವನ್ನು ಮಾಡುತ್ತಿದ್ದಾನೆ. ಈ 2–3 ದಿನಗಳಿಂದಲೂ ತಮ್ಮುವಿನ ಕೆಲಸವನ್ನು ನೋಡಿದುದರಲ್ಲಿ, ತಮ್ಮು ತನ್ನ ಕೆಲಸವನ್ನು ಬಹು ಶ್ರದ್ಧೆಯಿಂದ ಶಕ್ತಿ ಮೀರಿ ಮಾಡುತ್ತಿರುವನೆಂದು ಅವನಿಗೆ ತಿಳಿದುಬಂದಿದೆ. ತಮ್ಮುವಿಗೆ ಓದುಬರಹ ಬರಬಹುದೆಂದೂ, ಅವನು ಎಂದಿಗೂ ಕೂಲಿಯ ಹುಡುಗನಲ್ಲವೆಂದೂ ತಮ್ಮುವಿನ ನಡೆನುಡಿಗಳಿಂದಲೂ, ಆಕಾರದಿಂದಲೂ ಅವನಿಗೆ ದೃಢವಾಗಿ ಹೋಗಿದೆ.

ಅಷ್ಟರಲ್ಲಿ 'ಪೋಸ್ಟ್‌ಮ್ಯಾನ್' ಕೆಲವು ಕಾಗದಗಳನ್ನು ಗೋಪೀನಾಥನ ಕೈಗೆ ಕೊಟ್ಟು ಹೋದ. ಅವನು ಅವುಗಳನ್ನೆಲ್ಲ ಓದಿದ ಬಳಿಕ, ಅವುಗಳಲ್ಲಿ ಒಂದು ಕಾಗದವನ್ನು ಹಿಂದಕ್ಕೂ, ಮುಂದಕ್ಕೂ ತಿರುಗಿಸಿ ನೋಡಿದನು. ಕಾಗದವು ಯಾವ ಭಾಷೆಯಲ್ಲಿ ಬರೆದುದೆಂದು ತಿಳಿಯಲಿಲ್ಲ. 'ಧಾರವಾಡ'ದ ಪೋಸ್ಟ್ ಮೊಹರನ್ನು ನೋಡಿ, ಅದು 'ಕನ್ನಡ'ವಾಗಿರಬೇಕೆಂದು ಊಹಿಸಿದ. ಅವನಲ್ಲಿ ಕನ್ನಡ ಬರುವ ಗುಮಾಸ್ತರು ಇದ್ದಿಲ್ಲ. ಪಕ್ಕನೆ, ತಮ್ಮುವಿನ ಹೆಸರು ಅವನ ನೆನಪಿಗೆ ಬಂತು. ಅವನಿಗೇನಾದರೂ 'ಕನ್ನಡ ಬರುವುದೇ, ನೋಡುವ' ಎಂದು, ಅಲ್ಲಿಯೇ ಇದ್ದ ತಮ್ಮುವನ್ನು ಕರೆದ.

ತಮ್ಮು ಬಂದ. 'ನಿನಗೆ ಓದುಬರಹ ಬರುತ್ತದೆಯೇ?' ಎಂದು ಇಂಗ್ಲಿಷಿನಲ್ಲಿ ಗೋಪಿನಾಥ ಕೇಳಿದ. ತಮ್ಮು 'ಬರುತ್ತದೆ' ಎಂದ.

ತಮ್ಮುವಿಗೆ ಇಂಗ್ಲೀಷೂ ಬರುತ್ತಿದೆ ಎಂದು ಗೋಪೀನಾಥನಿಗೆ ಈಗ ತಿಳಿಯಿತು. ಅವನಿಗೆ ಆಶ್ಚರ್ಯವಾಯಿತು. 'ಈ ಕಾಗದವನ್ನು ನೋಡು. ಓದಲು ಬಂದರೆ, ಅದನ್ನು ಓದಿ ಅದರ ತಾತ್ಪರ್ಯವನ್ನು ನನಗೆ ಹೇಳು' ಎಂದನವನು.

ತಮ್ಮು ಕಾಗದವನ್ನು ಓದಿ. ಅದರ ಸಾರಾಂಶವನ್ನು ಹೇಳಿದ. ಧಾರವಾಡದ ಸಾಹುಕಾರನೊಬ್ಬನು ಕೆಲವು ಬಟ್ಟೆಗಳನ್ನು ಕಳುಹಬೇಕೆಂದು ಗೋಪೀನಾಥನಿಗೆ ಬರೆದ ಪತ್ರವದು.

ಗೋ:—'ನೀನು ಎಲ್ಲಿಯ ತನಕ ಓದಿರುವೆ?'

ತ:—'ಮೆಟ್ರಿಕ್ಕಿನ ವರೆಗೆ.'

**ಗೋ:—'ಏನು? ಮೆಟ್ರಿಕ್ಕಿನ ವರೆಗೆ? ಅಷ್ಟು ಓದಿ ಈ ಕೆಲಸಕ್ಕೆ ಬಂದೆಯಾ?**

ತ:—'ಇನ್ನೇನು ಮಾಡಲಿ? ಬೇರೆ ಕೆಲಸ ಸಿಕ್ಕಲಿಲ್ಲ.'

ಗೋಪಿನಾಥನು 'ಮೂರು ಗಂಟೆಗೆ ನಮ್ಮ ಅಂಗಡಿಗೆ ಬಾ. ಅಂಗಡಿಗೆ ಇಲ್ಲಿಂದ ಒಂದು ಫರ್ಲಾಂಗ್ ಮಾತ್ರ' ಎಂದು ಹೇಳಿದನು.

ತಮ್ಮ ಅದೇ ಪ್ರಕಾರ ಅಂಗಡಿಗೆ ಹೋದನು. ಗೋಪೀನಾಥನನ್ನು ಕಂಡನು. ಗೋಪೀನಾಥ 'ನೀನೋನೋ ಮೆಟ್ರಿಕ್ಕಿನ ವರೆಗೆ ಓದಿಯೂ ಮಣ್ಣು, ಇಟ್ಟಿಗೆಗಳನ್ನು ಹೊರಲು ಬಂದೆ. ಆದರೆ ನಿನ್ನನ್ನು ಆ ಸ್ಥಿತಿಯಲ್ಲಿ ಇಡಲು ನನಗೆ ತುಂಬ ನಾಚಿಗೆಯಾಗುತ್ತಿದೆ. ನನಗೆ ಒಬ್ಬ 'ಕ್ಲಾರ್ಕ್' ಬೇಕು. ಲೆಕ್ಕ ಪತ್ರಗಳಲ್ಲಿ ಸಹಾಯ ಮಾಡಲಿಕ್ಕೆ. ಅದೋ! ಆ ಕೊಟ್ಟಡಿಗೆ ಹೋಗು. ಅಲ್ಲಿ ಒಬ್ಬ 'ಕ್ಲಾರ್ಕ್'ನಿದ್ದಾನೆ. ಅವನು ನೀನು ಮಾಡತಕ್ಕ ಕೆಲಸಗಳನ್ನು ಹೇಳುವನು. ಅದನ್ನು ಜಾಗ್ರತೆಯಿಂದ ಮಾಡು. ಎರಡು ದಿನಗಳಲ್ಲಿಯೇ ನಿನ್ನ ನಂಬಳವನ್ನು ನಿಶ್ಚೈಸಿ ಹೇಳುವೆನು' ಎಂದನು.

ಇದನ್ನು ಕೇಳಿ ತಮ್ಮನಿಗೆ ಎಷ್ಟು ಆನಂದವಾಗಿರಬಹುದೋ! ನೀರಿಗೆ ಬಿದ್ದ ಕಡಲೆಯಂತೆ ಅವನು ಉತ್ಸಾಹದಿಂದ ಉಬ್ಬಿದ. ಆ ಕ್ಲಾರ್ಕ್‌ನಿದ್ದ ಕೊಟ್ಟಡಿಯೊಳಗೆ ಓಡಿದ. ಅವನು ತೋರಿಸಿಕೊಟ್ಟ ಕೆಲಸಗಳನ್ನು ಮಾಡಲು ಆರಂಭಿಸಿದ.

2 ದಿನಗಳ ಮೇಲೆ ಗೋಪೀನಾಥನು, ಆ ಹಿರಿಯ ಗುಮಾಸ್ತನನ್ನು ಗುಟ್ಟಿನಲ್ಲಿ ಕರೆದು, 'ಹೊಸ ಹುಡುಗ ಹೇಗಿದ್ದಾನೆ? ಅವನಿಂದ ನಮ್ಮ ಕೆಲಸ ಸಾಧ್ಯವಾದೀತೆ? ಅವನಿಗೆ ಎಷ್ಟು ಸಂಬಳ ಕೊಡಬಹುದು?' ಎಂದು ಕೇಳಿದನು.

'ಸ್ವಾಮೀ! ಹುಡುಗ ಬಹಳ ಚುರುಕಾಗಿದ್ದಾನೆ. ಹೇಳಿಕೊಟ್ಟ ಕೆಲಸವೆಲ್ಲಾ ತಪ್ಪಿಲ್ಲದೆ ಮಾಡುತ್ತಿದ್ದಾನೆ. ಅವನ ಗುಣ ನಡತೆಯೂ

ಸಮರ್ಪಕನಾಗಿ ತೋರುತ್ತದೆ. ನಾವು ಇಂಥ ಯೋಗ್ಯ ಹುಡುಗನನ್ನು ಕಳೆದುಕೊಳ್ಳಬಾರದು. ಇವನಿಗೆ ಈಗ ತಿಂಗಳಿಗೆ 35 ರೂಪ್ಯಾ ಸಂಬಳ ಕೊಟ್ಟರೂ ಹೋಗದು' ಎಂದನು ಆ ಹಿರಿಯ ಗುಮಾಸ್ತ.

ಗೋಪೀನಾಥನು ತಮ್ಮುವನ್ನು ಕರೆದು 'ನಿನಗೆ ಈಗ ತಿಂಗಳಿಗೆ 35 ರೂಪಾಯಿ ಸಂಬಳವೆಂದು ನಿಶ್ಚೈಸಿದ್ದೇನೆ' ಎಂದು ಹೇಳಿದನು.

'ಕ್ಲಾರ್ಕ್'! ತಿಂಗಳಿಗೆ 35 ರೂಪ್ಯಾ!' ತಮ್ಮು ಇದನ್ನು ನಂಬ ಒಲ್ಲನೇ? ಕ್ಷಣಕಾಲ ತಮ್ಮು ಮಾತಿಲ್ಲದೆ ಬೆರಗಾಗಿ ನಿಂತ! 'ಇದು ಸ್ವಪ್ನ ವಲ್ಲ; ನಿಜ'ವೆಂಬುದನ್ನು ತಿಳಿದುಕೊಂಡ. ಕಷ್ಟಲಾದ ತನ್ನ ಜೀವನದಲ್ಲಿ ಬೆಳದಿಂಗಳು ಬಂತೆಂದು ತಿಳಿದುಕೊಂಡ ಅನಂತರ ಗೋಪೀನಾಥನಿಗೆ ವಂದಿಸಿ ತನ್ನ ಕೆಲಸಕ್ಕೆ ಹೊರಟ.

ಆ ದಿನವೇ ತಮ್ಮು ಊರಿಗೆ ಪತ್ರ ಬರೆದ. ಅದರ ಸಾರಾಂಶವಿದು:– 'ನಾನು ನಿಮ್ಮ ಹತ್ತಿರ ಹೇಳಿದ್ದಂತೆ ಶಿವರಾಜಪುರಕ್ಕೆ ಹೋಗಲಿಲ್ಲ. ನಾನು 'ಫೈಲೆಂ'ದು ತಿಳಿದು ಬೊಂಬಾಯಿಗೆ ನೆಟ್ಟಗೆ ಬಂದೆ. ಈಗ ನನಗೆ ಇಲ್ಲಿ ಕ್ಲಾರ್ಕನ ಕೆಲಸವಾಗಿದೆ. ತಿಂಗಳಿಗೆ ರೂಪಾಯಿ 35 ಸಂಬಳ. ಅದರಲ್ಲಿ ಈ ತಿಂಗಳ ಅಂತ್ಯಕ್ಕೆ ರೂಪಾಯಿ 25ನ್ನು ನಿಮಗೆ ಮನಿಯಾರ್ಡರ್ ಮಾಡುತ್ತೇನೆ. ಪ್ರತಿ ತಿಂಗಳಲ್ಲಿಯೂ ಹಾಗೇ ಕೊಡುತ್ತೇನೆ. ಅದನ್ನು ಸಾಹುಕಾರರಿಗೆ 'ಪಾವತಿ' ಮಾಡಿ ನಮ್ಮ ಸಾಲ ತೀರಿಸಬಹುದು ನನ್ನ ವಿಳಾಸವಿದು:—ತಮ್ಮು ಶಾಸ್ತ್ರಿ, C/o ..........ಬೊಂಬಯಿ.'

---

## ಮೂವತ್ತೊಂದನೆಯ ಅಧ್ಯಾಯ.

## ಸಂಸಾರದ ಉದ್ಧಾರ.

ತಮ್ಮು ತಿಂಗಳೊಳಗಾಗಿ ಲೆಕ್ಕಪತ್ರಗಳ, ಪತ್ರವ್ಯವಹಾರಗಳ ಅನುಭವ ವನ್ನೆಲ್ಲ ಚೆನ್ನಾಗಿ ಮಾಡಿಕೊಂಡ. ಆ ಭಾಗದ ಕಾರ್ಯಗಳನ್ನು ಅವ ನೊಬ್ಬನೇ ನೋಡಿಕೊಳ್ಳುವಷ್ಟು ಸಾಮರ್ಥ್ಯವು ಅವನಲ್ಲಿ ಈಗ ಉಂಟಾ

ಯಿತು. ಹಿರಿಯ ಗುಮಾಸ್ತರಿಗೂ, ಗೋಪಿನಾಥನಿಗೂ ತಮ್ಮ ಎಂದರೆ ಬಹಳ ಪ್ರೀತಿಯ ಹುಡುಗನಾಗಿ ಹೋದ. ಅವರಿಬ್ಬರಿಗೂ ಅವನ ಮೇಲೆ ವಿಶೇಷ ವಿಶ್ವಾಸ; ನಂಬಿಕೆ.

ಅಕಸ್ಮಾತ್ತಾಗಿ, ಹಿರಿಯ ಗುಮಾಸ್ತರಿಗೆ ಅವರ ಊರಿಗೆ ಹೋಗ ಬೇಕಾದ ಸಂದರ್ಭ ಒದಗಿತು. 8 ದಿನಗಳಲ್ಲಿ ಬರುತ್ತೇನೆಂದು ಹೇಳಿ ಹೋದವರು ತಿರುಗಿ ಬರಲಿಲ್ಲ. ಹೋದವರೇ ವಿಷಮಜ್ವರದಿಂದ ಪೀಡಿತ ರಾಗಿ ಅಕಾಲಮೃತ್ಯುವಿಗೆ ವಶವಾದರು.

ತಮ್ಮ ಈಗ ಇಬ್ಬರ ಕೆಲಸವನ್ನೂ ಒಬ್ಬನೇ ಮಾಡಬೇಕಾಯಿತು. ಅವನು ಕೊಂಚವೂ ಆಲಸ್ಯವಿಲ್ಲದೆ, ತಪ್ಪಿಲ್ಲದೆ, ಚುರುಕಾಗಿ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದುದನ್ನು ನೋಡಿ, ಗೋಪೀನಾಥನು ಸುಪ್ರೀತ ನಾದನು; ಮತ್ತೂ ಹೇಳಿದನು:—'ಮೊದಲಿನ ತಿಂಗಳಲ್ಲಿ ನಿನಗೆ 35 ಕೊಟ್ಟೆ. ಈ ತಿಂಗಳಿಂದ ನಿನಗೆ 60' ಎಂದು.

ತಮ್ಮ ಕೃತಾರ್ಥನಾದೆ ಎಂದುಕೊಂಡ. 'ತಂದೆಗೆ ಇನ್ನು 45 ರೂಪಾ ಯಿಗಳನ್ನು ಕಳುಹಬಹುದು. ನಾನೂ ಇನ್ನು ಹಿಂದಿನಂತೆ ಒಂದು ಊಟ ವನ್ನು ಅಲ್ಲದೆ—ಎರಡು ಊಟಗಳನ್ನು ಮಾಡಬಹುದು. ಭಗವಂತ! ಈಗ ಲಾದರೂ ನಿನಗೆ ನಮ್ಮ ಮೇಲೆ ದಯೆಬಂತೇ? ನನ್ನ ಸಂಸಾರದ ಸಾಲ ತೀರುವ ಕಾಲ ಬಂತೇ?' ಎಂದು ಯೋಚಿಸುವಷ್ಟರಲ್ಲಿ ಊರಿಂದ ಬಂತು ರಾಮಬಾಣದಂಥ ಕಾಗದ. ಶಾಸ್ತ್ರಿಗಳದು. ಕಾಗದದ ಸಾರಾಂಶವಿದು:—

'ನೀನು ಕಳುಹಿಸಿ ಕೊಟ್ಟ 25 ರೂಪಾಯಿಗಳನ್ನು ಸಾಹುಕಾರರಲ್ಲಿಗೆ ತೆಗೆದುಕೊಂಡು ಹೋಗಿ ಕೊಟ್ಟೆ. ಅವರು ಮುಟ್ಟಲಿಲ್ಲ. ಏಕಗಂಟಿನಲ್ಲಿ 500ನ್ನಾದರೂ ಕೊಡದಿದ್ದ ಪಕ್ಷಕ್ಕೆ ದಾವಾ ಮಾಡುವುದೇ ಸಿದ್ಧವೆಂದು ಹೇಳಿ 'ಲಾಯರ್ ನೋಟೀಸೂ' ಕೊಟ್ಟಿದ್ದಾರೆ. ನಿನಗೆ ಕೆಲಸವಾಯಿತೆಂಬ ಸಂತೋಷದಲ್ಲಿ ಇದೊಂದು ದುಃಖ ಗಂಟುಬಿದ್ದಿದೆ. ಏನು ಮಾಡುವುದೆಂದು ತಿಳಿಯುವುದಿಲ್ಲ.'

ತಮ್ಮು ಕಾಗದವನ್ನೋದಿ ತಲೆಯ ಮೇಲೆ ಕೈಯಿಟ್ಟು ಕುಳಿತ. ಗೋಪೀನಾಥನು ಕರೆದುದೂ ಅವನಿಗೆ ಕೇಳಿಸಲಿಲ್ಲ. ಗೋಪೀನಾಥನು ಕೊಟ್ಟಡಿಯೊಳಗೆ ಬಂದುದೂ ತಿಳಿಯಲಿಲ್ಲ. ಗೋಪೀನಾಥನು ತಮ್ಮುವಿನ ಅವಸ್ಥೆಯನ್ನೂ, ಅವನ ಕೈಯಲ್ಲಿದ್ದ ಕಾಗದವನ್ನು ನೋಡಿ, 'ಏನು, ಏನಾ ಯಿತು?' ಎಂದು ಕೇಳಿದನು.

ತಮ್ಮು, ಗಾಬರಿಯಿಂದ ಎದ್ದು ನಿಂತು, 'ಏನೂ ಇಲ್ಲ; ಊರಿನಿಂದ ಕಾಗದ ಬಂದಿದೆ' ಎಂದ.

**ಗೋಪೀನಾಥ:**—'ಕಾಗದದಲ್ಲಿ ಏನು ವಿಶೇಷ!'

**ತಮ್ಮು:**—'ಏನೂ ಇಲ್ಲ!'

**ಗೋ:**—'ಏನೋ ಇರಬೇಕು. ಹೇಳು; ನನ್ನಿಂದ ಏನಾದರೂ ಆಗುವ ಹಾಗಿದ್ದರೆ ಮಾಡಿ ಕೊಡುತ್ತೇನೆ.'

ತಮ್ಮುವಿಗೆ ಸ್ವಲ್ಪ ಧೈರ್ಯ ಬಂತು. ಅವನು ತನ್ನ ಸಾಲದ ಸಂಗತಿ ಯನ್ನೂ, ಸಾಹುಕಾರರ 'ತಗಾದೆ'ಯನ್ನೂ, ಕಾಗದದ ವೃತ್ತಾಂತವನ್ನೂ ಗೋಪೀನಾಥನಿಗೆ ತಿಳಿಸಿದ.

**ಗೋ:**—'ಅಷ್ಟೇ ತಾನೇ? ಒಳ್ಳೆಯದು; ನಾನು ನಿನಗೆ ಮುಂಗಡವಾಗಿ 500 ರೂಪಾಯಿ ಕೊಡುತ್ತೇನೆ. ಅದನ್ನು ನಿಮ್ಮ ತಂದೆಗೆ ಕಳುಹಿಸು. ನಿನ್ನ ತಿಂಗಳ ಸಂಬಳದಲ್ಲಿ, ತಿಂಗಳೊಂದಕ್ಕೆ ರೂಪಾಯಿ 30ರಂತೆ ಆ ಮುಂಗಡದ ಸಂಬಂಧ 'ವಜಾ' ತೆಗೆಯಬಹುದು.'

ತಮ್ಮು ಕಣ್ಣಲ್ಲಿ ನೀರು ತಂದುಕೊಂಡು, 'ಈ ತಮ್ಮ ಉಪಕಾರವನ್ನು ನಾನೆಂದೂ ಮರೆಯಲಾರೆ. ಈ ನಮ್ಮ ಬಡ ಸಂಸಾರವನ್ನು ಉದ್ಧರಿಸಿದ ಪುಣ್ಯ ತಮಗೇ ಸೇರಬೇಕು' ಎಂದು ಕೈಮುಗಿದನು.

ಮರುದಿನ ಗೋಪೀನಾಥನು ಮುಂಗಡವಾಗಿ ಕೊಟ್ಟ 500 ರೂಪಾಯಿ ಗಳನ್ನು 'ಇನ್ಸೂರ್' ಮಾಡಿ ತಂದೆಗೆ ಕಳುಹಿದನು. ಅದು ತನಗೆ ಹೇಗೆ ಸಿಕ್ಕಿತೆಂದು ಜತೆಯಲ್ಲಿ ಪತ್ರವನ್ನೂ ಬರೆದನು.

---

## ಮೂವತ್ತೆರಡನೆಯ ಅಧ್ಯಾಯ.

## ಚಕ್ರಪಾಣಿಗೆ ಪತ್ರ.

ಬೊಂಬಯಿ ನೋಡದವರು, ತಮ್ಮ ಚಕ್ರಪಾಣಿಗೆ ಬರೆದ ಅದೊಂದು ಪತ್ರವನ್ನು ಓದಿದರೆ ಸಾಕು;—ಬೊಂಬಯಿ ಎಂದರೆ ಏನೆಂದೂ, ಅಲ್ಲಿರುವುದೇನೆಂದೂ ಸ್ವಲ್ಪಮಟ್ಟಿಗೆ ತಿಳಿದುಬರುವುದು. ತಮ್ಮ ಎರಡು ತಿಂಗಳಾದ ಒಳಿಕ, ರಾಮರಾಯನಿಗೂ, ಚಕ್ರಪಾಣಿಗೂ ಅವರಿಂದ ಸಾಲವಾಗಿ ಪಡೆದಿದ್ದ ಹಣವನ್ನು 'ಮನಿಯಾರ್ಡರ್' ಮಾಡಿ, ಅದರೊಂದಿಗೆ ಸಂಕ್ಷೇಪವಾದ ಪತ್ರವನ್ನು ರಾಮರಾಯನಿಗೂ, ವಿಸ್ತಾರವಾದ ಪತ್ರವನ್ನು ಚಕ್ರಪಾಣಿಗೂ ಒರೆದಿದ್ದ. ಚಕ್ರಪಾಣಿಯ ಪತ್ರವಿಸ್ತಾರಕ್ಕೆ 'ಬೊಂಬಯಿಯ ವರ್ಣನೆ' ಅದರಲ್ಲಿದ್ದುದೇ ಕಾರಣ. ಈ ವರ್ಣನೆಗೂ ಒಂದು ಕಾರಣವುಂಟು. ತನಗೆ ಕೆಲಸ ಬಿಟ್ಟು ಹೋಗಲಾಗುವುದಿಲ್ಲ; ಹಾಗೆಂದು ಚಕ್ರಪಾಣಿಯನ್ನು ಕಾಣಬೇಕಂಬ ಕುತೂಹಲವೂ, ಅವನೊಡನೆ ಮಾತಾಡಬೇಕಾದ ಕೆಲಸವೂ ತುಂಬಾ ಉಂಟು. ಆದಕಾರಣ ಬೊಂಬಾಯಿಯ ವೈಭವವನ್ನು ಬರೆದು, ಆ ಮೂಲಕ ಅದನ್ನು ನೋಡಿಯೇ ತೀರಬೇಕೆನ್ನುವ ಕಕ್ಕುಲಾತಿಯನ್ನು ಅವನಲ್ಲಿ ಉಂಟುಮಾಡಿದರೆ, ಅವನು ಅಲ್ಲಿಗೆ ಬರುವುದು ಖಂಡಿತ. ಅಷ್ಟಕ್ಕಾಗಿಯೇ ಚಕ್ರಪಾಣಿಯ ಪತ್ರದಲ್ಲಿ ಬೊಂಬಯಿಯ ವರ್ಣನೆಯನ್ನು ಮಾಡಿದ್ದ.

ಚಕ್ರಪಾಣಿಯ ಪತ್ರವು ಹೀಗಿತ್ತು:—

'ಪ್ರಿಯ ಮಿತ್ರನೆ! ನಾನು ನಿನ್ನೊಡನೆ ಮಾತಾಡಿ ಹೊರಟವನು, ನೆಟ್ಟಗೆ ರೈಲ್ ಹಾದಿ ಹಿಡಿದೆ. 'ಬೊಂಬಾಯಿ ದೊಡ್ಡ ಪಟ್ಟಣ; ಹೋದವರಿಗೆಲ್ಲ ಒಂದೊಂದು ಕೆಲಸ ಕೊಡುವವರಿದ್ದಾರೆ; ಊರಿನಲ್ಲಿ ಸಂಬಳ 10 ಆದರೆ, ಅಲ್ಲಿ ರೂಪಾಯಿ 50'–ಹೀಗೆಂದು ಅನೇಕ ಮಂದಿ ಹೇಳುವುದನ್ನು ಕೇಳಿ ಅಲ್ಲಿಗೆ ಟಿಕೆಟ್ ಮಾಡಿಸಿದೆ. ಮುಟ್ಟುವುದಕ್ಕೆ 3 ದಿನ ಹಿಡಿಯಿತು. ದಾರಿಯಲ್ಲಿ ಏನು ಭಂಡಾಟ! ಜನರ ನೂಕು ನುಗ್ಗಲು! ಸಾಮಾನಿನ ಹೇರಾಟ! ತಗುಣಗಳ

ಕಾಟ! ತಾಯಿ ಹಾಕಿದ ಬಜೆ ಬೆಣ್ಣೆಯೆಲ್ಲ ಈ ರೈಲ್ ಪ್ರಯಾಣದಲ್ಲಿ ಕರಗಿ ಹೋಯಿತು. ಹಗಲಾದರೂ ಕಿಟಿಕಿಯ ಹೊರಗೆ ತಲೆ ಹಾಕಿ, ಗಿರಿ, ಬೆಟ್ಟ, ಗುಡ್ಡ, ಕಾಡು, ಹೊಲ, ಗವಿ, ಗಟ್ಟ, ಮೈದಾನು, ನದಿ, ಸೇತುವೆ,— ಮೊದಲಾದ ಸುಂದರವಾದ ನೋಟಗಳನ್ನು ನೋಡುತ್ತ ಹೊತ್ತು ಹೋಗುತಿತ್ತು. ರಾತ್ರಿ ಇವುಗಳನ್ನು ನೋಡಲಿಕ್ಕೂ ಇಲ್ಲ. ಕಣ್ಣು ಹಚ್ಚಿ ನಿದ್ರಿಸಲಿಕ್ಕೂ ಇಲ್ಲ! ಹೇಗೂ ಬೊಂಬಾಯಿಗೆ ಬಂದು ಬಿದ್ದೆ. ಕೆಲಸಕ್ಕಾಗಿ ನಾಯಿ ಅಂಡಲೆದಂತೆ ಅಲೆದೆ. 2–3 ದಿನ. ಯಾರೂ ಕೆಲಸ ಕೊಡಲಿಲ್ಲ. ಕೊನೆಗೆ ಯಾರೋ ಒಬ್ಬ ಪುಣ್ಯಾತ್ಮ ಗುಮಾಸ್ತನ ಕೆಲಸ ಕೊಟ್ಟ. ಅಲ್ಲಿದ್ದೇನೆ ಈಗ.

ಚಕ್ರಪಾಣಿ! ನೋಡಬೇಕು, ನೋಡಬೇಕು ಬೊಂಬಾಯಿ; ಹುಟ್ಟಿದುದಕ್ಕೆ! ಅದೊಂದು ಸುಂದರವಾದ ನಗರ. ದ್ವೀಪದ ಮೇಲೆ ಕಟ್ಟಿದುದು. ಬಹು ತಗ್ಗಾಗಿದೆ ಸಮುದ್ರದ ಮಟ್ಟಕ್ಕೆ ಸರಿಯಾಗಿಯೇ ಇದೆ. ಅಲ್ಲಿ 'ಕ್ರಾಫೋರ್ಡ್ ಮಾರ್ಕೆಟ್' ಎಷ್ಟು ದೊಡ್ಡದು! 'ಗ್ರಾಂಟ್ ಮೆಡಿಕಲ್ ಕಾಲೇಜ್' ಎಷ್ಟು ದೊಡ್ಡದು! 'ವಿಕ್ಟೋರಿಯಾ ಡಾಕ್ಸ್' ಎಷ್ಟು ದೊಡ್ಡದು! ಗ್ರಾಂಟ್ ರೋಡಿನ 'ರೈಲ್ವೇ ಸ್ಟೇಶನ್', ಪರೇಲಿನ 'ವಿಕ್ಟೋರಿಯಾ ಉಪವನ' ಇವೆಷ್ಟು ದೊಡ್ಡದು! ಮಾತುಂಗದಲ್ಲಿ 'ವಿಕ್ಟೋರಿಯಾ ಜುಬಿಲಿ' ಕೈಗಾರಿಕೆಯ ಸಂಸ್ಥೆ; ಮಾಹಿಮಿನಲ್ಲಿ 'ಸರ್ ಡೇವಿಡ್ ಸಾಸೂನರವರ ರಿಫರ್ಮೇಟರಿ;' ಆ ಮೇಲೆ 'ಮಂಗಲದಾಸರ ಬಟ್ಟೆಗಳ ಸಂತೆ;' ಮುಂಬಾದೇವಿಯ ದೇವಸ್ಥಾನ; ಐಶ್ವರ್ಯವಂತರಾದ ಅನೇಕ ಮಂದಿ ಹಿಂದೀಯರಿಗೂ, ಯುರೋಪೀಯರಿಗೂ ವಾಸಸ್ಥಾನವಾದ ಮನೋಹರವಾದ ಆ 'ಮಲಬಾರ್ ಹಿಲ್'; 'ಗವರ್ನಮೆಂಟ್ ಹೌಸ್'; ಪಾರ್ಸಿಗಳ 'ಮೌನ ಗೋಪುರ'— ಇವೆಲ್ಲವನ್ನೂ ಒಬ್ಬನು ನೋಡಿಯೇ ತೀರಬೇಕು. ಇನ್ನು ದಕ್ಷಿಣ ಭಾಗಕ್ಕೆ, ಕೊಲಾಬಕ್ಕೆ ಹೋದರೆ ಅಲ್ಲಿ ಏನು ಕಡಿಮೆ! ಅಫ್ಘಾನ್ ಇಗರ್ಜಿಯನ್ನು ನೋಡುತ್ತಿಯೋ? ಅರಳೆಯ ಕಾರ್ಖಾನೆಗಳನ್ನು ನೋಡುತ್ತಿಯೋ? 'ಮಿಲಿಟರಿ ಬ್ಯಾರಕ್ಸ್' ನೋಡುತ್ತಿಯೋ? 'ರೈಲ್ವೇ ಟರ್ಮಿನಸ್ ಸ್ಟೇಶನ್' ನೋಡುತ್ತಿಯೋ? ಯುದ್ಧನೌಕೆಯ 'ಡಾಕ್–ಯಾರ್ಡ್ಸ್'ನ್ನು ನೋಡುತ್ತಿಯೋ? ನೋಡುವುದು ಯಾವುದನ್ನು? ಬಿಡುವುದು ಯಾವುದನ್ನು?

ಕೋಟೆಯ ಕಡೆಗೆ ಬಂದರೆ, ಅಲ್ಲಿಯೂ ಹೀಗೆಯೇ. ಒಳ್ಳೊಳ್ಳೆಯ ಅಂಗಡಿಗಳು; ಬೇಂಕುಗಳು; ಕ್ಲಬ್ಬುಗಳು; ಆಫೀಸುಗಳು. ವಿಶ್ವವಿದ್ಯಾಲಯ, ಹ್ಯಾಕೋರ್ಟು, ಜನರಲ್ ಪೋಸ್ಟಾಫೀಸು, ಟೆಲಿಗ್ರಾಫ್ ಆಫೀಸ್, ಸೆಕ್ರಟೇರಿಯೆಟ್ ಮುಂತಾದ ಭವ್ಯ ಮಂದಿರಗಳೆಲ್ಲವೂ ಇರುವುದು ನಗರದ ಆ ಭಾಗದಲ್ಲಿಯೇ;—ಸಮುದ್ರ ಮುಖದಲ್ಲಿ. ತಾಜಮಹಾಲ್ ಹೋಟೆಲ್, ಅಪೊಲ್ಲೋ ಬಂದರ್, ಕವಾಸ್ಜಿ ಜಹಾಂಗೀರನ ಸಾರ್ವಜನಿಕ ಮಂದಿರ, ತವಾಷೆ ಬಂಗಲೆ, ಎಲ್ಫಿನ್‌ಸ್ಟನ್ ಕಾಲೇಜ್, ನೆಲ–ಜಲ ಸೈನ್ಯಗಳ ಕೋ-ಓಪರೇಟಿವ್ ಸ್ಟೋರ್ಸ್, ನಾವಿಕ ಮಂದಿರ, ನೇಶನಲ್ ಬೇಂಕ್—ಇವುಗಳಾದರೂ ಇರುವುದೆಲ್ಲಿ? ಅಲ್ಲಿಯೇ.

ಮತ್ತೂ ನೋಡಬೇಕಾದುದೆಷ್ಟೋ ಉಂಟು. 'ವೋಲ್ ಸ್ಟೇಶನ್;' 'ಅಲೆಕ್ಸಾಂಡ್ರಾ ಡೋಕ್ಸ್;' 'ಕಸ್ಟಮ್ಸ್ ಹೌಸ್;' ಮ್ಯುನಿಸಿಪಲ್ ಆಫೀಸ್; 'ಟ್ಯಾಮ್ಸ್ ಆಫ್ ಇಂಡಿಯಾ'ದ ಮುದ್ರಾಲಯ; 'ವಿಕ್ಟೋರಿಯಾ ಟರ್ಮಿನಸ್'–ಇನ್ಶ್ಯುರೆನ್ಸ್ ಕಂಪೆನಿಗಳ ಆಫೀಸು; ಸಿನೆಮಾ ಮಂದಿರ; ನಾಟಕ ಗೃಹ ಇತ್ಯಾದಿ, ಇತ್ಯಾದಿ;—ಇವನ್ನೆಲ್ಲ, ಬರೆದು ಪೂರೈಸುವ ಹಾಗಿಲ್ಲ; ನಾನಿಷ್ಟು ಬರೆದರೂ 'ವರಹದಲ್ಲಿ ಒಂದು ಕಾಸನ್ನೂ ಬಳಸಿದ' ಹಾಗಾಗಲಿಲ್ಲ!

ಚಕ್ರಪಾಣಿ! ನೀನು ಇವುಗಳನ್ನೆಲ್ಲ ಕಣ್ಣಾರ ನೋಡಬೇಡವೇ? ಚಃ! ಇವುಗಳನ್ನು ನೋಡದವ ಮನುಷ್ಯನೇ ಅಲ್ಲ. ನಾನು ಸಾಹುಕಾರರಲ್ಲಿ ಕೆಲಸಕ್ಕೆ ಇರುವವನಾದುದರಿಂದಲೂ, ಅಲ್ಲಲ್ಲಿಗೆ ಆಗಾಗ ಕೆಲಸಕ್ಕೆ ಹೋಗಿ ಬರಬೇಕಾಗಿರುವುದರಿಂದಲೂ ನನಗೆ ಇವುಗಳನ್ನು ನೋಡುವ ಸುಯೋಗವು ದೊರಕಿತು. ಆದರೂ ಇನ್ನೂ ನಾನು ನೋಡದ, ನೋಡಬೇಕಾದ ಮಂದಿರಗಳೂ, ಸ್ಥಳಗಳೂ ಬೊಂಬಾಯಿಯಲ್ಲಿ ಎಷ್ಟೋ ಇವೆಯಂತೆ!

ನೀನೇಕೆ ಒಮ್ಮೆ ಇಲ್ಲಿಗೆ ಬರಬಾರದು? ನೀನು ಸದ್ಯದಲ್ಲಿಯೇ ಮುಂದಿನ ಓದಿಗಾಗಿ ಯಾವುದಾದರೊಂದು ಕಾಲೇಜಿಗೆ ಹೊರಡುವೆ. ಅಲ್ಲಿ ರಜೆ ಬಂದಾಗ ಇಲ್ಲಿಗೆ ಬಾ. ನಾಲ್ಕು ದಿನ ನನ್ನ ಜತೆಯಲ್ಲಿರು. ಬೊಂಬಾಯಿಯನ್ನು ನೋಡಿಕೊಂಡು ಹಿಂದಿರುಗಬಹುದು.

ಸಣ್ಣದೊಂದು ಪ್ರಸ್ತಾವವನ್ನು ನಿನ್ನಲ್ಲೀಗ ಮಾಡದಿರಲಾರೆ. ಮನೆಯಲ್ಲಿ ಒಬ್ಬಳು ತಂಗಿ ಇದ್ದಾಳೆ ಮದುವೆಗೆ ಸಿದ್ಧವಾಗಿ ನಿಂತವಳು. ಅವಳನ್ನು ನಿನಗೇ ಕೊಡಬೇಕೆಂದು ನನ್ನ ಆಸೆ. ನನ್ನ ಮೇಲೆ ಅಭಿಮಾನವಿಟ್ಟು ಈ ನನ್ನ ಆಸೆಯನ್ನು ಪೂರೈಸಿಕೊಡಲಾರೆಯಾ?'.... ...ತಮ್ಮು.

---

# ಮೂವತ್ತಮೂರನೆಯ ಅಧ್ಯಾಯ.

## ಶ್ರೀರಾಮಪುರದಲ್ಲಿ.

ಐದಾರು ವರ್ಷಗಳ ಮೇಲೆ ತಮ್ಮು ತನ್ನ ಊರಿಗೆ ಬಂದಿದ್ದಾನೆ. ಶಾಸ್ತ್ರಿಗಳು ಸಾಹುಕಾರರಲ್ಲಿ ಮಾಡಿದ ಸಾಲವನ್ನು ಅವನೀಗ ತೀರಿಸಿದ್ದಾನೆ. ತಾನು ಗೋಪೀನಾಥನಿಂದ ಪಡೆದ ಮುಂಗಡವನ್ನೂ ಸಲ್ಲಿಸಿದ್ದಾನೆ. ಅವನಿಗೀಗ ಮದುವೆಯಾಗಿದೆ,-ಅದೇ ರಾಮಾಶಾಸ್ತ್ರಿಗಳ ಮಗಳು; ಸರಸ: ತಂದೆಯನ್ನು 6 ವರ್ಷವಾಗುವಾಗಲೇ ಕಳೆದುಕೊಂಡ ಬಡ ಅನಾಥ ಕನ್ಯೆ. ಅವನ ತಂಗಿ ಪದ್ಮನಿಗೂ ಲಗ್ನವಾಗಿದೆ. ಆಕೆಯ ಗಂಡ ಯಾರು? ನಮ್ಮ ಚಕ್ರಪಾಣಿ: ತಮ್ಮುವಿನ ಪ್ರಯತ್ನದಿಂದ ನಡೆದುದು ಅದು.

ತಮ್ಮು ಅಂದು 60 ರೂಪಾಯಿಗಳ ಕ್ಲಾರ್ಕನಾಗಿದ್ದವನು ಕ್ರಮಶಃ ಅಲ್ಲಿ ಮ್ಯಾನೇಜರನಾದ. ವ್ಯಾಪಾರವನ್ನು ಚೆನ್ನಾಗಿ ವೃದ್ಧಿಗೊಳಿಸಿದ ಇದರಿಂದ ಸಂತುಷ್ಟನಾದ ಗೋಪೀನಾಥನು ನಮ್ಮ ತಮ್ಮುವಿನ ಸಂಬಳವನ್ನು 300ರ ವರೆಗೂ ಏರಿಸಿದ. ಈ ಸಂಬಳದಿಂದ, ತಮ್ಮು ತಂದೆಯ ಸಾಲವನ್ನೂ, ತಾನು ತೆಗೆದುಕೊಂಡ ಮುಂಗಡವನ್ನೂ, ಸಲ್ಲಿಸಲು ಶಕ್ತನಾದ. ಅಷ್ಟೇ ಅಲ್ಲದೆ, ತನ್ನ ಮತ್ತು ತಂಗಿಯ ಮದುವೆಗಳನ್ನು ಯಥೋಚಿತವಾಗಿ ನೆರವೇರಿಸಿ,—ಕೈಯಲ್ಲಿ 4-5 ಸಾವಿರ ನಗದಿಯನ್ನೂ ಮಾಡಿಕೊಂಡ. ಇದಲ್ಲವೇ, ಬುದ್ಧಿಶಾಲಿಗಳ ಲಕ್ಷಣ?

ಕೈಯಲ್ಲಿ ಈ ದುಡ್ಡು ಸೇರಿದ ಬಳಿಕ,-ಊರಿಗೆ ಹೋಗಿ, ವಸ್ತ್ರದ ಒಂದು ಚಿಕ್ಕ ಅಂಗಡಿ ತೆರೆದು, ಅಲ್ಲಿಯೇ ಏತಕ್ಕೆ ಸ್ವತಂತ್ರವಾದ ಉದ್ಯೋಗವನ್ನು

ಆರಂಭಿಸಬಾರದೆಂದು ಯೋಚನೆ ತಮ್ಮುವಿಗೆ ಹುಟ್ಟಿತು. ಸಮಯ ನೋಡಿ ಇದನ್ನು ಗೋಪೀನಾಥನಲ್ಲಿಯೂ ಅರಿಕೆಮಾಡಿಕೊಂಡ. 'ನನ್ನ ತಂದೆ ತಾಯಿಗಳು ಮುದುಕರಾಗುತ್ತ ಬಂದರು ಅವರ ಸೇವೆಗೆ ಇನ್ನಾದರೂ ನಾನು ಒದಗಬೇಡವೇ? ಹೊಟ್ಟೆ ಬಾಯಿ ಕಟ್ಟಿ, ಸಾಲಶೂಲ ಮಾಡಿ, ನನ್ನನ್ನು ಓದಿಸಿದುದಕ್ಕೆ, ಅವರನ್ನು ಈಗಲಾದರೂ ನಾನು ಸಂರಕ್ಷಿಸಿ, ಸುಖ ಪಡಿಸಬೇಡವೇ? ಅವರಿಗೆ ನಾನು ಒಬ್ಬನೇ ಮಗ. ನಾನು ಇನ್ನೂ ಇಲ್ಲಿಯೇ ಸಂಪಾದನೆಗೆಂದು ಕುಳಿತುಬಿಟ್ಟರೆ, ದೈವವು ಮುನಿಯದೇ? ಲೋಕವು ನಿಂದಿಸದೇ? ಅವರೂ ಸಂತಪಿಸರೇ? ಆ ಕಾರಣದಿಂದ, ತಾವು ನನಗೆ ಹೊರಡಲು ಸಂತೋಷದಿಂದ ಅಪ್ಪಣೆ ಕೊಡಬೇಕು. ಮತ್ತೂ ತಮ್ಮ ಹೆಸರನ್ನು ಹೇಳಿ, ನಾನು ಆರಂಭಿಸಬೇಕೆಂದಿರುವ ವಸ್ತ್ರದ ವ್ಯಾಪಾರದ ಉದ್ಯೋಗಕ್ಕೆ ನನ್ನನ್ನು ಆಶೀರ್ವದಿಸಿ ಕಳುಹಬೇಕು. ನಾನು ತಮ್ಮಲ್ಲಿಂದಲೇ ವಸ್ತ್ರಗಳನ್ನು ತರಿಸಿ ವ್ಯಾಪಾರ ಮಾಡುತ್ತೇನೆ. ನನ್ನ ಕೈಯಲ್ಲಿ ಈಗ ಇರುವ 'ನಗದಿ'ಯನ್ನು ತೆಗೆದುಕೊಂಡು, ನನಗೆ ವಸ್ತ್ರಗಳನ್ನು ಕೊಡಿಸಬೇಕು' ಎಂದು ಹೇಳಿದನು.

ಗೋಪಿನಾಥನಿಗೆ ಒಂದು ಕಡೆ ವ್ಯಸನ; 'ಪ್ರಾಮಾಣಿಕನಾದ ಹುಡುಗ; ವಿಶ್ವಾಸಕ್ಕೆ ಯೋಗ್ಯ; ಬುದ್ಧಿಶಾಲಿ; ನನ್ನ ವ್ಯಾಪಾರವನ್ನು ಇಷ್ಟು ವೃದ್ಧಿಗೆ ತಂದವನೇ ಇವನು. ಇಂಥವನು ಹೊರಟು ಹೋಗುವನಲ್ಲ! ಇವನಂಥವನು ನನಗೆ ಇನ್ನು ಸಿಕ್ಕಲಾರನಲ್ಲ!' ಎಂದು. ಒಂದು ಕಡೆ ಸಂತೋಷ,—'ಅವನ ಕರ್ತವ್ಯವನ್ನು ಸಾಧಿಸಲಿಕ್ಕಾಗಿ, ಸ್ವತಂತ್ರವೃತ್ತಿಯನ್ನು ಅವಲಂಬಿಸಲಿಕ್ಕಾಗಿ ಸ್ವಸ್ಥಾನವನ್ನು ಸೇರುವನಲ್ಲ!' ಎಂದು ಗೋಪೀನಾಥನು ಕ್ಷಣಕಾಲ ಯೋಚಿಸಿ, 'ಒಳ್ಳೆಯದಪ್ಪ! ನೀನು ಹೇಳುವುದು ಸಹಜ. ನಿನ್ನ ಮಾತಿಗೆ ಅಡ್ಡ ಬಂದು ಪಾಪವನ್ನು ಕಟ್ಟಿಕೊಳ್ಳಲಾರೆ. ಇನ್ನೊಂದು ತಿಂಗಳು ಇಲ್ಲಿರು;—ನಿನ್ನ ಕೆಲಸದ ಅನುಭವವನ್ನು ಇತರರಿಗೆ ಮಾಡಿಸಿಕೊಡು; ಆ ಮೇಲೆ ಹೊರಟು ಹೋಗಬಹುದು' ಎಂದನು. ತಮ್ಮು ಅದಕ್ಕೆ ಒಪ್ಪಿದನು.

ಅದರಂತೆ ತಮ್ಮು ಒಂದು ತಿಂಗಳ ಬಳಿಕ, ಬೇಕಾದ ಬಟ್ಟೆಗಳನ್ನು ಕೊಂಡುಕೊಂಡು ಬೊಂಬಯಿಯಿಂದ ಹೊರಟ. ಗೋಪಿನಾಥನು ಇವನಿಗೆ

ಆ ಸಮಯದಲ್ಲಿ 500 ರೂಪಾಯಿಗಳನ್ನು ಉಚಿತವಾಗಿ ಕೊಟ್ಟು, 'ಇದು ನಗದಿಯಾದ ಬಂಡವಾಳವಾಗಿರಲೆ'ಂದು ಉಪದೇಶಿಸಿದ. ತಮ್ಮು ಆ 500 ರೂಪಾಯಿಗಳನ್ನು ಊರಿಗೆ ತೆಗೆದುಕೊಂಡು ಬಂದ. ವ್ಯಾಪಾರಕ್ಕೆ ಆರಂಭಿಸಿದ. 'ಕಡಿಮೆ ಬೆಲೆ; ಒಳ್ಳೆಯ ಬಟ್ಟೆ; ಪ್ರಾಮಾಣಿಕತನದ ವ್ಯಾಪಾರ'ವೆಂದು ಸ್ವಲ್ಪ ಸಮಯದಲ್ಲಿಯೇ ತಮ್ಮುವಿನ ಹೆಸರು ನಾಲ್ಕು ಕಡೆಯೂ ಹಬ್ಬಿತು. ವ್ಯಾಪಾರವೂ ದಿನದಿನಕ್ಕೆ ಹೆಚ್ಚುತ್ತ ಹೋಯಿತು.

ತಮ್ಮುವಿನ ಕೀರ್ತಿ ಬರೀ ವ್ಯಾಪಾರದಿಂದಲೇ ಅಲ್ಲ ಹಬ್ಬಿದುದು; ಅವನ ತಾಲೂಕು ಬೋರ್ಡ್ ಮೆಂಬರಿಕೆಯೂ ಅವರ ಹೆಸರನ್ನು ಮತ್ತಷ್ಟು ಮುಂದಕ್ಕೆ ತಂದಿತು. ಅವನು ಬೋರ್ಡಿನ ಸಭೆಯಲ್ಲಿ ಸುಮ್ಮನೆ ತಲೆಯಾಡಿಸಿ ಬರುವ 'ಬಸವಣ್ಣ'ನಾಗಿರಲಿಲ್ಲ. ಅಗತ್ಯವಿರುವ ವಿಷಯಗಳನ್ನು ಸಭೆಯ ಮುಂದಿಟ್ಟು, ಸಕಾರಣವಾಗಿ ವಾದಿಸಿ, ತನ್ನನ್ನು ಆರಿಸಿದ್ದ ಮತದಾರರ ಹಿತಕ್ಕಾಗಿ ಮನಃಪೂರ್ವಕವಾಗಿ ಹೋರಾಡುತ್ತಿದ್ದ. ಅಷ್ಟೇ ಅಲ್ಲ. ಅವನು ಶ್ರೀರಾಮಪುರದಲ್ಲಿ ಚಿಕ್ಕದೊಂದು ಕರ್ಣಾಟಕ ಗ್ರಂಥಭಂಡಾರವನ್ನೂ, ವಾಚನಾಲಯವನ್ನೂ ತನ್ನ ವೆಚ್ಚದಿಂದಲೇ ಸ್ಥಾಪಿಸಿ ಅಲ್ಲಿರುವ ಸಮಸ್ತರ ಶ್ಲಾಘನೆಗೂ ಪಾತ್ರನಾಗಿದ್ದ. ಅವನು ಅವಕಾಶ ದೊರಕಿದಂತೆ ವೃತ್ತಪತ್ರಗಳಿಗೂ, ಮಾಸಿಕಪತ್ರಿಕೆಗಳಿಗೂ ಉತ್ತಮ ಲೇಖನಗಳನ್ನು ಬರೆದು ಕಳುಹುತ್ತಿದ್ದುದೂ ಸಾಲದೆ, ಒಂದೆರಡು ಉತ್ಕೃಷ್ಟ ಪುಸ್ತಕಗಳನ್ನೂ ರಚಿಸಿದ್ದ. ಇದರಿಂದ ತನಗೆ ಕನ್ನಡ ಭಾಷೆಯ ಮೇಲಿರುವ ನಿಸ್ಸೀಮ ಪ್ರೇಮವನ್ನು ವ್ಯಕ್ತಗೊಳಿಸಿದ್ದ. ಒಂದು ಕಾಲದಲ್ಲಿ ಅನೇಕರ ಬಾಯಲ್ಲಿ ಸಲಿಗೆಯಾಗಿ ಓಡಾಡುತ್ತಿದ್ದ 'ನಮ್ಮ ತಮ್ಮು' ಇಂದು ಇಷ್ಟು ಕಾರ್ಯಭಾರಗಳನ್ನು ನಿರ್ವಹಿಸಬಲ್ಲ ಸಮರ್ಥವ್ಯಕ್ತಿಯಾಗುವನೆಂದು ಯಾರಾದರೂ ಎಂದಾದರೂ ಊಹಿಸಿದ್ದರೇನು?

---

## ಮೂವತ್ತನಾಲ್ಕನೆಯ ಅಧ್ಯಾಯ.

### ತಮ್ಮು ಶಾಸ್ತ್ರಿಗಳ ಅಧ್ಯಕ್ಷತೆ.

ಶ್ರೀರಾಮಪುರದ ಶಾಲಾವಾರ್ಷಿಕೋತ್ಸವನ್ನು ಅಂದೊಮ್ಮೆ ನೋಡಿದವರು, ಇಂದೂ ಒಮ್ಮೆ ಅದನ್ನು ನೋಡಲು ಇಲ್ಲಿಗೆ ದಯೆಮಾಡಬಾರದೇ? ಇಂದು

ಈ ವರ್ಧಂತಿಯು ವಿಜೃಂಭಣೆಯಿಂದ ನೆರವೇರಲು, ತಿಂಗಳುಗಟ್ಟಲೆಯಾದ ಪ್ರಯತ್ನಗಳೇ ನಡೆದಿವೆ. ಸಮೀಪದಲ್ಲಿರುವ ಗ್ರಾಮಗಳಿಗೆಲ್ಲಾ ಆಹ್ವಾನ ಪತ್ರಗಳು ಹೋಗಿವೆ. ಸಮಾರಂಭದ ಮಂಟಪವನ್ನು ಶಾಲೆಯ ಹೊರ ಭಾಗದ ವಿಸ್ತಾರವಾದ ಅಂಗಣದಲ್ಲಿ ರಚಿಸಲಾಗಿದೆ. ಎಲ್ಲೆಲ್ಲಿಯೂ ತೋರಣ; ಹೂಮಾಲೆ; ಧ್ವಜಪತಾಕೆ; ಜತೆಯಲ್ಲಿಯೇ ಯಥೋಚಿತವಾದ ಆಸನಗಳು. ನೋಡಿದರೆ, ಅದೊಂದು ಶ್ರೀಮಂತರ ಮದುವೆಯ ಮನೆಯ ಹಾಗೆ ಕಾಣಿಸುತ್ತದೆ. 'ಜನ ಮರುಳೋ, ಜಾತ್ರೆ ಮರುಳೋ' ಎಂಬಂತೆ, ಈ ಹೊಸ ಪರಿಯ, ವೈಭವಯುಕ್ತವಾದ ವರ್ಧಂತಿಯನ್ನು ನೋಡಲು, ಶ್ರೀರಾಮಪುರದಿಂದ ಅಲ್ಲದೆ, ಹಳ್ಳಿಪಳ್ಳಿಗಳಿಂದಲೂ ತಂಡೋಪತಂಡವಾಗಿ ಜನರು ಬಂದು ಸೇರಲು ಉಪಕ್ರಮಿಸಿದ್ದಾರೆ. ಈಗಾಗಲೇ ೨—೩ ಸಾವಿರಕ್ಕೂ ಮಿಕ್ಕಿ ಜನಸಂದಣಿಯು ಮಂಟಪದಲ್ಲಿ ತುಂಬಿದೆ. ಇಂದು, ನಮ್ಮ ಹಳೆಯ ವಿದ್ಯಾರ್ಥಿಯಾದ ತಮ್ಮುವೇ ಇದರ ಅಧ್ಯಕ್ಷನೆಂದೂ, ಶ್ರೀ। ರಾಮರಾಯರ ಭಾಷಣವೊಂದು ಈ ಸಂದರ್ಭದಲ್ಲಿ ಪ್ರತ್ಯೇಕವಾಗಿ ಇರುವುದೆಂದೂ ಹಸ್ತಪತ್ರಗಳನ್ನು ಅಚ್ಚು ಹಾಕಿಸಿ, ಅಲ್ಲಲ್ಲಿ ಹಂಚಿಸಿದುದರಿಂದಲೇ ಇಷ್ಟೊಂದು ಜನರ ದೊಡ್ಡ ಗುಂಪು ಸೇರಲು ಕಾರಣ.

ರಾಮರಾಯನೀಗ ಮೊದಲಿನ ರಾಮರಾಯನಲ್ಲ. 4 ವರ್ಷಗಳ ಕೆಳಗೆ ಅವನ ತಂದೆ ಹೋಗಿ, ಸಂಸಾರದ ಭಾರವು ತಲೆಗೆ ಹೇರಿದ ಬಳಿಕ ಅವನಿಗೆ ಹೊಸ ಜನ್ಮವು ಬಂದಿದೆ. ಈ ಜನ್ಮದಲ್ಲಿ ಸದುದ್ಯೋಗವೇ ಅವನ ಜೀವನದ ಮುಖ್ಯ ವೃತ್ತಿ. ಅಂತಹ ವೃತ್ತಿಯಲ್ಲಿ ಕನ್ನಡ ಭಾಷೆಯ ಸೇವೆಯೂ ಒಂದು. ಆ ಸೇವೆಗೆ ಅವನಿಗೆ ದೇವರು ಕೊಟ್ಟ ಅನುಕೂಲವು ಬೇಕಾದ ಹಾಗೆ ಇತ್ತು. ಅವನಿಗೆ ದುಡ್ಡಿನ ಕೊರತೆ ಇರಲಿಲ್ಲ;—ತಂದೆ ಕೂಡಿಸಿಟ್ಟ ಹಣವೂ, ಸಂಪಾದಿಸಿಟ್ಟ ಜಮೀನೂ ಹೇರಳವಾಗಿದ್ದುವು. ಅವನ ಕನ್ನಡ ಭಾಷೆಯ ಪರಿಜ್ಞಾನವಾದರೂ ಕಡಿಮೆಯಾಗಿರಲಿಲ್ಲ. ಅವನು ಕರ್ಣಾಟಕ, ಸಂಸ್ಕೃತ, ಮತ್ತೂ 'ಇಂಗ್ಲೀಷ್' ಗ್ರಂಥಗಳನ್ನು ಓದುತ್ತಲೂ, ವ್ಯಾಸಂಗ ಮಾಡುತ್ತಲೂ ಕ್ರಮವಾಗಿ ಭಾಷಾಜ್ಞಾನವನ್ನೂ, ವಿಷಯಜ್ಞಾನವನ್ನೂ

ಹೆಚ್ಚಿಸಿಕೊಂಡ; ತಮ್ಮುವಿನಂತೆ, ಅವನ ಪ್ರೇರೇಪಣೆಯಂತೆ ಕರ್ಣಾಟಕ ಭಾಷೆಯ ಸೇವೆಗೆ ಕೈ ಇಕ್ಕಿದ. ಈ ದಿನ ಈ ಶಾಲೆಯ ಹುಡುಗರು ಅಭಿನೈಸುವುದಕ್ಕಿದ್ದ 'ಅತ್ತೆಯ ಸಿಟ್ಟು ಸೊಸೆಗೆ ಶಣ್ಣಗೆ' ಎಂಬ ಪ್ರಹಸನವನ್ನೂ ಅವನೇ ಬರೆದು ಕೊಟ್ಟಿದ್ದ.

ಹೊತ್ತಿಗೆ ಸರಿಯಾಗಿ ವರ್ಧಂತಿಯ ಕಾರ್ಯಕ್ರಮವು ಆರಂಭವಾಯಿತು. ಸ್ವಲ್ಪ ಹೊತ್ತಿಗೆ ಮೊದಲು, ಸಭೆಯಲ್ಲಿ ಹಂಚಿದ ಆ ಅಚ್ಚಾದ ಕಾರ್ಯಕ್ರಮದ ಪಟ್ಟಿಯ ಮೇರೆಗೆ,—ಅಧ್ಯಕ್ಷರ 'ಚುನಾವಣೆ'ಯೂ ಪ್ರಥಮತಃ ನಡೆಯಿತು. ತಮ್ಮು ಶಾಸ್ತ್ರಿಗಳು ನಗೆಮೊಗದಿಂದ ಉಚಿತವಾದ, ಉನ್ನತವಾದ ಅಧ್ಯಕ್ಷಸ್ಥಾನವನ್ನು ಅಲಂಕರಿಸಿ, ಸಮಯೋಚಿತವಾದ ಆರಂಭಭಾಷಣವನ್ನು ನಾಲ್ಕು ಮಾತುಗಳಲ್ಲಿಯೇ ಮುಗಿಸಿ, ಮುಂದಿನ ಕಾರ್ಯಭಾಗಗಳನ್ನು ಒಂದೊಂದಾಗಿ ಓದುತ್ತ ಬಂದರು. ಓದಿದ ಹಾಗೆಲ್ಲ ಒಂದೊಂದೇ ವಿಷಯವು ಕ್ರಮವಾಗಿ ಜರುಗುತ್ತ ಬಂದಿತು. ಈ ದಿನದ ವಿಶೇಷ ಅತಿಥಿಗಳಾಗಿ ದಯೆಮಾಡಿಸಿದ್ದ ಶ್ರೀಗಳಾದ ರಾಮರಾಯರೂ, ಹಂಗಾಮಿ ತಹಶೀಲ್ದಾರರಾದ ಚಕ್ರಪಾಣಿಯವರೂ ಸಭೆಯ ಮುಂಭಾಗದಲ್ಲಿ ಕುಳಿತಿದ್ದು, ಕಾರ್ಯಕ್ರಮದ ವಿಷಯವು ಮುಗಿದ ಹಾಗೆಲ್ಲ 'ಜಯಘೋಷ'ವನ್ನು ಮಾಡುತ್ತಿದ್ದರು. ಜನರೂ, ಅವರೊಡನೆ ಸೇರಿ, ತಮ್ಮ ಆನಂದವನ್ನೂ, ಉತ್ಸಾಹವನ್ನೂ ತೋರ್ಪಡಿಸುತ್ತಿದ್ದರು.

ನಾಲ್ಕನೆಯ ವಿಷಯವೇ, ಕಾರ್ಯಕ್ರಮದಲ್ಲಿ, ರಾಮರಾಯರ ಭಾಷಣ. ಈ ಭಾಷಣಕ್ಕೆ ಹೆಡ್ಮಾಸ್ಟರರ ಸೌಜನ್ಯದಿಂದ ಇಲ್ಲಿ ಅವಕಾಶವು ದೊರಕಿತ್ತು. ಭಾಷಣದ ವಿಷಯವು 'ಕನ್ನಡ',—ಆ ಕುರಿತು ರಾಮರಾಯರು ಮಾಡಿದ ಭಾಷಣದ ಸಾರಾಂಶವು ಹೀಗಿತ್ತು:—

'ಪ್ರಮುಖ ಭಾಷೆಗಳೊಂದಿಗೆ ಕನ್ನಡವನ್ನು ಹೋಲಿಸುವಾಗ, ಕನ್ನಡವು ಹಿಂದುಳಿದಿದೆ ಎಂಬುದು ನಿರ್ವಿವಾದ. ಆದುದರಿಂದ ಅದರ ಉನ್ನತಿಗಾಗಿ ನಾವೆಲ್ಲರೂ ಕೆಲಸ ಮಾಡಬೇಕು ಆ ಕೆಲಸದಲ್ಲಿ ಮೂರನ್ನು ಮಾತ್ರ ನಾನೀಗ ಹೇಳುತ್ತೇನೆ. ಮೊದಲನೆಯದಾಗಿ, ಎಳೆಯ

ಮಕ್ಕಳಲ್ಲಿ ಬಾಲ್ಯದಿಂದಲೇ ಕನ್ನಡದ ಅಕ್ಕರೆಯು ಬೆಳೆಯುವಂತೆ, ಅವರ ಅಭಿರುಚಿಗೆ ತಕ್ಕ ಪುಸ್ತಕಗಳನ್ನು ಸುಲಭವಾದ ಮಾತುಗಳಲ್ಲಿ ಬರೆದೋದಿಸಬೇಕು. ಇದನ್ನು ದಕ್ಷಿಣ ಕನ್ನಡದವರಾಗಲೇ ಕೈಕೊಂಡಿರುವರೆಂಬುದನ್ನು ತಿಳಿಸಲು ನಾನು ತುಂಬ ಸಂತೋಷಿಸುತ್ತೇನೆ. ಎರಡನೆಯದಾಗಿ ಧಾರವಾಡದ ವಿದ್ಯಾವರ್ಧಕ ಸಂಘವೂ, ಬೆಂಗಳೂರಿನ 'ಸಾಹಿತ್ಯ ಪರಿಷತ್ತೂ' ಒಳ್ಳೊಳ್ಳೆಯ ಕರ್ಣಾಟಕ ಗ್ರಂಥಗಳನ್ನು ಅಣಿಮಾಡಿಟ್ಟಿರುವುದೆಂಬುದನ್ನು ನಾವು ನೆನಪಿನಲ್ಲಿಡಬೇಕು. ಅದರಲ್ಲಿಯೂ ಬೆಂಗಳೂರಿನ ಕರ್ಣಾಟಕ ಸಂಘವೊಂದು ತನ್ನ 'ಪ್ರಬುದ್ಧ ಕರ್ಣಾಟಕ'ವೆಂಬ ಮಾಸ ಪತ್ರಿಕೆಯ ಮೂಲಕ, ಕನ್ನಡಿಗರಿಗೆ ಹೊಸ ರೀತಿಯ ಕನ್ನಡ ಗ್ರಂಥಗಳನ್ನು ಒದಗಿಸಿಕೊಟ್ಟು ಉಪಕರಿಸುತ್ತಿದೆ ಎಂಬ ಅಂಶವನ್ನಾದರೂ ನಾವಿಲ್ಲಿ ಸರ್ವಥಾ ಮರೆಯಬಾರದು. ಈ ಸಂದರ್ಭದಲ್ಲಿ, ಈ ದಿನದ ನಮ್ಮ ಅಧ್ಯಕ್ಷರಾದ ಶ್ರೀಯುತ ತಮ್ಮು ಶಾಸ್ತ್ರಿಗಳೊಬ್ಬರೇ,—ಅವರು ನಡೆಯಿಸಿಕೊಂಡು ಬರುತ್ತಿರುವ ಧರ್ಮಾರ್ಥವಾದ ಪುಸ್ತಕ ಭಂಡಾರಕ್ಕೆ,—ಇವೆಲ್ಲ ಪುಸ್ತಕಗಳನ್ನೂ ತರಿಸಿಕೊಡಬೇಕೆಂದು ಹಾರೈಸದೆ, ನಿಮ್ಮಲ್ಲಿ ಶಕ್ತರಾದ ಇನ್ನು ಕೆಲವರೂ ಅಂತಹ ಕಲಕೆಲವು ಗ್ರಂಥಗಳನ್ನು ಆ ಪುಸ್ತಕಭಂಡಾರಕ್ಕೆ ಒದಗಿಸಿಕೊಟ್ಟು, ಅದರ ಪ್ರಯೋಜನವು ಎಲ್ಲರಿಗೂ ದೊರೆಯುವಂತೆ ಮಾಡಬೇಕು. ಮೂರನೆಯದಾಗಿ, ಕರ್ಣಾಟಕದಲ್ಲಿ ಹಿಂದೆ ಆಗಿಹೋದ ಉದ್ದಾಮ ಕವಿಗಳ ಸ್ಮಾರಕೋತ್ಸವಗಳನ್ನು, ಉಚಿತವಾದ ಕಾಲದಲ್ಲಿ, ನೀವೆಲ್ಲರೂ ಹೀಗೆಯೇ ಸಭೆ ಸೇರಿ, ಉತ್ಸಾಹಪೂರ್ವಕವಾಗಿ ನಡೆಯಿಸಬೇಕು. ಈಗಳಿನ್ನು ಮುಂದೆ ನಡೆಯುವ, ಬಾಲಕರಿಗೆಂದು ಬರೆದಿರುವ ಆ ಪ್ರಹಸನದ ನ್ಯೂನತೆಗಳಿಗಾಗಿ ನನ್ನನ್ನು ಮನ್ನಿಸಿ ಮಮತೆಯಿಂದ ಅವಲೋಕಿಸಬೇಕು.'

ಪ್ರಹಸನವು ಆರಂಭವಾಗುವ ಮೊದಲು, ಪುಸ್ತಕರೂಪವಾಗಿ ಅಚ್ಚು ಹಾಕಿದ ಅದರ * ಕಥಾಸಾರಾಂಶವನ್ನು, ಸಭೆಯಲ್ಲೆಲ್ಲ ಹಂಚಿದುದಾಯಿತು. ಸಂಗಡಲೇ ಪ್ರಹಸವೂ ಆರಂಭವಾಯಿತು. ಮೊದಲಿಂದ ಕೊನೆಯ

---

*145ನೇ ಪುಟವನ್ನು ನೋಡಿರಿ.

ವರೆಗೂ ನಗೆ; ಚಪ್ಪಾಳೆ; ಸಣ್ಣ ತರಗತಿಯ ವಿದ್ಯಾರ್ಥಿಗಳ ಕೋಲಾಹಲಕ್ಕಂತೂ ಮಿತಿಯೇ ಇಲ್ಲ.

ಪ್ರಹಸನವು ಮುಗಿದು, ಇತರ ಕಾರ್ಯಕ್ರಮಗಳು ಜರುಗಿ. ಈಗ ಅಧ್ಯಕ್ಷರ ಭಾಷಣ ಅಧ್ಯಕ್ಷರು ಅಂದಿನ ಅಧ್ಯಕ್ಷರಾದ ಪೋಲೀಸ್ ಇನಸ್ಪೆಕ್ಟರರಂತೆ ಮೂರು ಮಾತುಗಳಲ್ಲಿ ತಮ್ಮ ಭಾಷಣವನ್ನು ಮುಗಿಸಲಿಲ್ಲ ಅದಕ್ಕೆ ಮುಕ್ಕಾಲು ಗಂಟೆ ಹಿಡಿಯಿತು. ಅವರು ಸುಶ್ರಾವ್ಯವಾದ, ಬೋಧಪ್ರದವಾದ ಆ ಉಚಿತಭಾಷಣವನ್ನು, ಎಲ್ಲರಿಗೂ ತಿಳಿಯುವ ಸುಲಭವಾದ ಕನ್ನಡಭಾಷೆಯಲ್ಲಿ, ಮಧುರವಾದ ಕಂಠದಿಂದ ಮಾಡಿದರು. ಕಾರ್ಯಕ್ರಮಗಳ ಒಂದೊಂದೇ ಭಾಗವನ್ನು ಶ್ಲಾಘಿಸಿ, ಈ ಹೆಡ್ಮಾಸ್ತರರ ನಿರಂತರವಾದ ಶ್ರಮಸಾಹಸಗಳಿಂದ ಈ ಶಾಲೆಯು ಹೇಗೆ ಕ್ರಮವಾಗಿ ಇಷ್ಟು ವೃದ್ಧಿಗೆ ಬಂತೆಂಬುದನ್ನು ವಿವರಿಸಿದರು. ರಾಮರಾಯರ ಸೂಚನೆಗಳನ್ನು ಎತ್ತಿ ಹಿಡಿದು, ವಿದ್ಯಾಂಗದವರು ಈಗ ಕನ್ನಡಕ್ಕೆ ಕೊಟ್ಟಿರುವ ಸ್ಥಾನವು ನಾಮಮಾತ್ರವೆಂದೂ; ಇಂಗ್ಲಿಷು ಹೊರತು ಮಿಕ್ಕ ವಿಷಯಗಳನ್ನೆಲ್ಲ, 'ಮೆಟ್ರಿಕ್ಕಿನ ವರೆಗಾದರೂ ಕನ್ನಡದಲ್ಲಿಯೇ ಕಲಿಸುವಂತಾಗಬೇಕೆಂದೂ, ಅದಕ್ಕಾಗಿ ಎಲ್ಲರೂ ಪ್ರಬಲವಾಗಿ ಪ್ರಯತ್ನಿಸಬೇಕೆಂದೂ ಪ್ರಾರ್ಥಿಸಿದರು. ಕೊನೆಯಲ್ಲಿ, ವಿದ್ಯಾರ್ಥಿಗಳ ಜೀವನವೆಂದರೇನು? ಅದು ಹೇಗಿರಬೇಕು? ಕ್ರಮವಾದ ವ್ಯಾಸಂಗದಿಂದ ಏನು ಲಾಭ? ಒಳ್ಳೆಯ ಗೆಳೆತನದ ಪರಿಣಾಮವೇನು?— ಎಂಬಿತ್ಯಾದಿ ಹಲವು ಸಂಗತಿಗಳನ್ನು, ತನ್ನ ಉದಾಹರಣೆಯ ಅನುಭವದಿಂದಲೇ ವಿಶದಗೊಳಿಸಿ, ಶಿಕ್ಷಣ ಕ್ರಮದಲ್ಲಿ ಆಗಬೇಕಾದ ಕೆಲವೊಂದು ಮಾರ್ಪಾಡುಗಳನ್ನು ಸೂಚಿಸಿ ವಿರಮಿಸಿದರು.

ಹೆಡ್ಮಾಸ್ತರರು ಅನಂತರದಲ್ಲಿ ತಮ್ಮನ್ನು ಶಿಷ್ಯನೆಂದು ಆಶೀರ್ವದಿಸಿಯೂ, ಅಧ್ಯಕ್ಷರೆಂದು ಧನ್ಯವಾದಗಳನ್ನು ಅರ್ಪಿಸಿಯೂ ಅಂದಿನ ಮಹೋತ್ಸವದ ಕಲಾಪಗಳನ್ನು 'ಜಯ ಕರ್ಣಾಟಕ'ವೆಂಬ ಉದ್ಘೋಷದೊಡನೆ ಮುಕ್ತಾಯಗೊಳಿಸಿದರು. ಜನರು, ಇಂದಿನ ವಿದ್ಯಮಾನಗಳನ್ನು ವರ್ಣಿಸಿ ಮಾತಾಡುತ್ತ, ಅದರಿಂದ ವಿನೋದಗೊಂಡು ಆನಂದಿಸುತ್ತ, ಎಡೆ

ಬಿಡದೆ ಅದನ್ನು ಶ್ಲಾಘಿಸುತ್ತ, 'ಇಂತಹ ಸುಪುತ್ರನನ್ನು ಪಡೆದ ಶಾಸ್ತ್ರಿಗಳೇ ಧನ್ಯರು' ಎಂದು ತಲೆದೂಗುತ್ತಾ ಮನೆಗೆ ತೆರಳಿದರು.

ವೃದ್ಧರಾದ ಶಾಸ್ತ್ರಿಗಳೂ, ಅವರ ಹೆಂಡತಿಯೂ ಸುಪುತ್ರನಾದ ತಮ್ಮುವಿನಿಂದ ಕೃತಕೃತ್ಯರಾಗಿರುವರು. ಒಬ್ಬನೇ ಚಂದ್ರನಿಂದ ಆಕಾಶವು ಬೆಳಗುವಂತೆ, ಅವರ ಸಂಸಾರವೂ ಈಗ ಆ ಒಬ್ಬನೇ ಮಗನಿಂದ ಬೆಳಗುತ್ತಿರುವುದು.

ಶ್ರೀರಾಮಪುರದ ಹೆಡ್ಮಾಸ್ಟರರು ಇನ್ನೂ ಇರುವರು. ಇನ್ನಾದರೂ ಅವರು ಹೀಗೆನ್ನುವುದು ಬಿಟ್ಟಿಲ್ಲ. "ನಿಮ್ಮ 'ಸ್ಕೂಲ್ ಫೈನಲ್' ಎಲ್ಲಿ? ನಮ್ಮ 'ಮೆಟ್ರಿಕ್ಯುಲೇಶನ್' ಎಲ್ಲಿ? 'ಮುತ್ತು ಕಟ್ಟಿರೂ ಜೋಳಕ್ಕೆ ಸರಿಯೇ?' ಎಂಬಂತೆ ನಮ್ಮ ತಮ್ಮು 'ಮೆಟ್ರಿಕ್' ಫೈಲಾದರೂ ಕೂಡ, ಸ್ಕೂಲ್ ಫೈನಲ್ ಆದವರಿಗೂ ಹತ್ತು ಪಾಲು ಮಿಗಿಲಾಗಿ ದುಡ್ಡನ್ನೂ ಸಂಪಾದಿಸಿದ; ಕೀರ್ತಿಯನ್ನೂ ಸಂಪಾದಿಸಿದ. ಸುಮ್ಮನೆಯಲ್ಲ;—ಹಳೇ ಮೆಟ್ರಿಕ್ಕಿಗೆ ಅಷ್ಟೊಂದು ಮರ್ಯಾದೆ!"






# ಅತ್ತೆಯ ಸಿಟ್ಟು ಸೊಸೆಗೆ ತಣ್ಣಗೆ

## (ಕಥಾಸಾರಾಂಶ.)

ಒಂದೂರಲ್ಲಿ ಒಬ್ಬಳು ಅತ್ತೆ; ಒಬ್ಬಳು ಸೊಸೆ. ಅತ್ತೆಯೋ? ಬೆಂಕಿಯ ಜ್ವಾಲೆ, ಸೊಸೆಯನ್ನು ಹುರಿದು ಮುಕ್ಕುವಳು; ಇಲ್ಲದ ಚಿಬಟಾಳ ಮಾಡುವಳು. ಮನೆಯಲ್ಲಿ ಅಧಿಕಾರವೆಲ್ಲ ಅತ್ತೆಯದೇ ಸಾಕೆನ್ನುವವಳೂ ಅವಳೇ, ಬೇಕೆನ್ನುವವಳೂ ಅವಳೇ. ಅವಳು ಪೂರ್ವಕಾಲದ ಒಬ್ಬ ಉರಿಮಾರಿ ಅತ್ತೆ; ಕೂತಲ್ಲಿಂದ ಹೊಸಕಳು; ಉಗುರು ಮುರಿದು ನೀರಿಗೆ ಹಾಕಳು. ಹಗಲೂ ಇರುಳೂ ಸೊಸೆಯೇ ಬೇಕಾದರೆ ಕತ್ತೆ ಚಾಕರಿ ದುಡಿಯಬೇಕು.

ಸೊಸೆಗೆ ಎಲ್ಲರಂತೆ ತಾನೂ ಉಂಡು, ತಿಂದು ಸುಖ ಪಡಬೇಕೆಂದು ಆಸೆ. ಅದರಲ್ಲಿಯೂ ಅವಳಿಗೆ ನಿಂಬೆಯ ಉಪ್ಪಿನಕಾಯಿ ಎಂದರೆ ಜೀವಪ್ರಾಣ. ಮನೆಯಲ್ಲಿ ಅದು ಭರಣಿ ಭರಣಿಗಳಲ್ಲಿ ತುಂಬಿಟ್ಟಿದೆ; ಗಂಡನ ಎಲೆಗೂ, ಅತ್ತೆಯ ಎಲೆಗೂ ಬೇಕಾದಷ್ಟು ಬೀಳುತ್ತಿದೆ; ಸೊಸೆಗೆ ಮಾತ್ರ ಸೊನ್ನೆ. ಒಂದು ದಿನ ಇದನ್ನು ಗಂಡನ ಕಿವಿಗೆ ಹಾಕಿದಳು. ಎಷ್ಟಾದರೂ ಕೈ ಹಿಡಿದ ಗಂಡ ಪಾಪ, ತಿನ್ನಲೆಂದು ಒಂದು ಹೋಳು ಚೆಲ್ಲಿ ಹೋದ. ಹೆಂಡತಿ ತಿಂದಳು. ಅತ್ತೆ ನೋಡಿದಳು. ಬಂತು ಸೊಸೆಯ ಪ್ರಾಣಕ್ಕೆ! ಅತ್ತೆ ಮಹಾಂಕಾಳಿಯಂತೆ, ಮನೆಯೆಲ್ಲ ಕುಣಿದು, ಊರೆಲ್ಲ ಒಂದು ಮಾಡಿದಳು. 'ಇವಳನ್ನು ಜೀವಸಹಿತ ಇರಗೊಡಿಸಬಾರದು; ಏನು, ನೋಡುತ್ತೀ? ಕುಂಬಾರ! ಕಟ್ಟು ಇವಳನ್ನು!' ಎಂದು ಮಗನನ್ನು ಬೆದರಿಸಿದಳು. ಮಗ ಚಾಪೆ ತಂದು ಹೆಂಡತಿಯನ್ನು ಕಟ್ಟಿದ. ಇಬ್ಬರೂ ಸೇರಿ ಹೊತ್ತರು

ಹೊತ್ತು ತಂದರು ಒಂದು ಕಾಡಿಗೆ. ಕುಂಟೆಗಳನ್ನು ಕೂಡಿದರು. ಅದರ ಮೇಲೆ ಸೊಸೆಯ ಗಂಟು ಇಟ್ಟರು. ಇನ್ನು ಬೆಂಕೀ ಕೊಡಬೇಕು. ಆದರೆ, ಬೆಂಕೀ ಪೆಟ್ಟಿಗೆ ಎಲ್ಲಿ? ತರಲು ನೆನಪಿಲ್ಲ; ಏನು ಮಾಡುವುದು? ಯಾರು ತರುವುದು? ಸೊಸೆ ತಂದಾಳೇ? ಓಡಿ ಹೋದಾಳು. ಮಗ

ತಂದಾನೇ? ತಾನೊಬ್ಬಳೇ;—ಕತ್ತಲೆ; ಅಡವಿ; ತಾನೇ ತರುವೆನೆಂದರೆ—ಒಬ್ಬಳು, ಹೆಣ್ಣು ಹೆಂಗಸು, ಹೇಗೆ ತಂದಾಳು? ಕೊನೆಗೆ ತಾಯಿ ಮಗ ಇಬ್ಬರೂ ಹೊರಟರು. 'ಮೂದೇವಿ ಹೆಣ್ಣೆ! ಕೇಳದೆ ಉಪ್ಪಿನ ಕಾಯಿ ತಿಂದದ್ದಕ್ಕೆ ಅನುಭವಿಸು ಈಗ' ಎಂದು ಅತ್ತೆ, ಮೂರು ಬಾರಿ ನೆಲಕ್ಕೆ ಹೊಡೆದು ಹೊರಟಳು.

ಸೊಸೆ ನೋಡಿದಳು. 'ಇದೇ ಸಮಯ' ಅಂದಳು. ಕಟ್ಟು ಸಡಲಿಸಿಕೊಂಡಳು. ಮೇಲಕ್ಕೆ ಎದ್ದಳು. ದೊಡ್ಡದೊಂದು ಕುಂಟೇ ತಂದಳು. ಚಾಪೆಯಲ್ಲಿ ಸುತ್ತಿದಳು. ಅದನ್ನು ಮೊದಲಿನಂತೆಯೇ ಸೌದೆಯ ರಾಶಿಯ ಮೇಲಿಟ್ಟಳು. ಓಡಿದಳು. ಸ್ವಲ್ಪ ಹೊತ್ತಿಗೆ ತಾಯಿ ಮಗ ಬಂದು, ಚಾಪೆ ಗಂಟಿಗೆ ಬೆಂಕೀ ಕೊಟ್ಟು 'ಸೊಸೆ'ಯನ್ನು ಬೂದಿಮಾಡಿ ಹೋದರು.

ಸೊಸೆ, ಅಲ್ಲಿಂದ ಉಸಿರುಕಟ್ಟಿ ಓಡಲಿಕ್ಕೆ ತೊಡಗಿದವಳು ಒಂದು ಮೈಲು ಓಡಿದಳು. ಅವಳಿಗೆ ಕತ್ತಲು ಇಲ್ಲ; ಭೂತ ಪ್ರೇತಗಳಿಲ್ಲ; ಹುಲಿ ಕರಡಿಗಳಿಲ್ಲ;—ಅತ್ತೆಯೊಬ್ಬಳು ಎದುರಿಗೆ ಬಾರದಿದ್ದರೆ ಸರಿ! ಕೊನೆಗೆ ಅವಳಿಗೊಂದು ಅಮ್ಮನವರ ದೇವಸ್ಥಾನ ಸಿಕ್ಕಿತು. ಬಾಗಲು ತೆರೆದಿತ್ತು. ಅವಳು ಅದರೊಳಗೆ ಹೊಕ್ಕಳು. ಮೂರ್ತಿಯ ಹಿಂದೆ ಅಡಗಿ ಕುಳಿತಳು.

ಅದು ಕಳ್ಳರ ದೇವಸ್ಥಾನ. ಕದಿಯಲು ಹೋಗುವಾಗಲೆಲ್ಲ ಇಲ್ಲಿಗೆ ಬಂದು ಹರಿಕೆ ಹೇಳಿಕೊಂಡು ಹೋಗುವರು. ಇಂದೂ ಹಾಗೆಯೇ ಬಂದರು; ಹರಿಕೆ ಹೇಳಿಕೊಂಡರು. ಸೊಸೆ ಹೆದರದೆ 'ಒಳ್ಳೇದು; ಹೋಗಿ ಬನ್ನಿ!' ಎಂದಳು. ಕಳ್ಳರು 'ದೇವಿಯೇ ಪ್ರತ್ಯಕ್ಷ ಮಾತಾಡಿದಳೆ'ಂದು ಸಂತೋಷಿಸಿ ಅಡ್ಡಬಿದ್ದು ಹೋದರು.

ಸ್ವಲ್ಪ ಹೊತ್ತಿನ ಮೇಲೆ ಅವರೇ ತಿರುಗಿ ಬಂದರು. ಈ ದಿನ ಅವರಿಗೆ ಕೊಳ್ಳೆ ಧಾರಾಳ ಸಿಕ್ಕಿತ್ತು. ಅವರು ಕೆಲವು ಆಭರಣಗಳನ್ನೂ, ಪೀತಾಂಬರಗಳನ್ನೂ ಬೆಳ್ಳಿಯ ಹರಿವಾಣದಲ್ಲಿಟ್ಟು ದೇವಿಗೆ ಹರಿಕೆಯೊಪ್ಪಿಸಿದರು. 'ಒಳ್ಳೇದು; ಹೋಗಿ ಬನ್ನಿ' ಎಂದು ಪುನಃ ಸೊಸೆ ಮಹಾದೇವಿಯ ಅಪ್ಪಣೆಯಾಯಿತು. ಅವರು ತೆರಳಿದರು.

ಸೊಸೆ ಮರುದಿನ ಬೆಳಗ್ಗೆ ಮನೆಯ ಬಾಗಿಲಲ್ಲಿ; ಕೈಯಲ್ಲಿ ಹರಿಕೆಯ ಹರಿವಾಣ ಹಿಡಿದುಕೊಂಡು 'ಬಾಗಿಲು' ಎಂದು ಹಾಗೇ ಕೂಗುತ್ತಾ ಇದ್ದಾಳೆ. ಅತ್ತೆ, ಯಾರೋ ಎಂದು ಬಾಗಿಲು ತೆರೆದು ನೋಡುತ್ತಾಳೆ. ಯಾರು? ಸೊಸೆ! ಅತ್ತೆಗೆ ಜೀವ ಹಾರಿತು; ಹಾರಿದ ಜೀವ ಪುನಃ ಬಂತು. ಈಗ ಹರಿವಾಣದ ಮೇಲೆ ಕಣ್ಣು ಬಿತ್ತು. 'ಸೊಸೆ ಬಳುವಳಿ ತಂದಿದ್ದಾಳೆ.' ಅತ್ತೆಗೆ ಎಷ್ಟು ಸಂತೋಷ! ಆ ಸಂತೋಷದಲ್ಲಿ ಕೇಳಿದಳು:—'ಇದೆಲ್ಲ ಎಲ್ಲಿಯದೇ, ನನ್ನ ಭಾಗ್ಯಲಕ್ಷ್ಮಿ?'

ಸೊಸೆ ಆ ಬಳುವಳಿಯದಲ್ಲ, ಬಹುಮಾನದ ಕಥೆ ಹೇಳಿದಳು. 'ಮತ್ತೆ ನೋಡಿ, ನೀವು ನನ್ನನ್ನು ಸುಟ್ಟ ಮೇಲೆ ಯಮಲೋಕಕ್ಕೆ ಹೋದೆ. 'ಯಾರು ನೀನು?' ಎಂತ ಯಮ ಕೇಳಿದ. ನಿಮ್ಮ ಹೆಸರು ಹೇಳಿ, ಅವರ ಸೊಸೆ ಅಂದೆ. ಅದಕ್ಕೆ ಯಮ 'ಎಂಥಾ ಮೋಸ ವಾಯಿತು! ನಾನು ಹೇಳಿ ಕಳುಹಿಸಿದ್ದು ನಿನಗಲ್ಲ; ನಿಮ್ಮತ್ತೆಗೆ. ಅವರು ನಿಂಬೇ ಉಪ್ಪಿನ ಕಾಯಿ ಹಾಕುವುದರಲ್ಲಿ ಬಹಳ ಗಟ್ಟಿಗರಂತೆ. ನಮ್ಮಲ್ಲಿ ನಿಂಬೇ ಹಣ್ಣುಂಟು. ಹಾಕುವವರಿಲ್ಲ. ಆಗಲಿ; ಚಿಂತ್ಯವಿಲ್ಲ. ನೀನು ಹೋಗಿ ನಿಮ್ಮತ್ತೆಯನ್ನು ಕಳುಹಿಸು' ಎಂದ. 'ನಮ್ಮಲ್ಲಿಗೆ ಬಂದವರು ಹಾಗೇ ಬರಿಗೈಯಲ್ಲಿ ಹೋಗಬಾರದು. ಇಗೋ! ಸೀರೆ, ಕುಪ್ಪಸ, ಆಭರಣ' ಎಂದು ಒತ್ತಾಯಮಾಡಿ ಇವನ್ನು ನನ್ನ ಕುತ್ತಿಗೆಗೆ ಕಟ್ಟಿ ಕಳುಹಿಸಿದ. ನಾನು ಅದನ್ನು ತೆಗೆದುಕೊಂಡು ಇದೇ ಈಗ ಬಂದೆ' ಎಂದಳು.

ಅತ್ತೆ ಹಿಗ್ಗಿ ಹೋದಳು. 'ಉಪ್ಪಿನ ಕಾಯಿ ಹಾಕಲು ಬಾರದ ನನ್ನ ಸೊಸೆಗೇ ಇಷ್ಟು ಬಹುಮಾನ. ಇನ್ನು ರುಚಿಯಾಗಿ ಉಪ್ಪಿನ ಕಾಯಿ ಹಾಕಲು ಬರುವ ನನಗೋ? ಕನಕಾಭಿಷೇಕವೇ! ಅದನ್ನು ಬಿಟ್ಟವ ರುಂಟೇ?' ಎಂದುಕೊಂಡಳು. ಕರೆದಳು ಮಗನನ್ನು. 'ಯಮರಾಯ ಹೇಳಿ ಕಳುಹಿಸಿದ್ದಾನೆ. ಅವನಿಗೆ ನಿಂಬೇ ಹಣ್ಣಿನ ಉಪ್ಪಿನಕಾಯಿ ಹಾಕಿಕೊಡಬೇಕಂತೆ. ಹಾಕಿಕೊಟ್ಟು ಬರುತ್ತೇನೆ. ಮನೆಯ ಕಡೆ ಜೋಕೆ'

ಎಂದು ಹೇಳಿದಳು. ಸೊಸೆಗೆ ಮಾಡಿದಂತೆ, ತನಗೂ ಮಾಡಬೇಕೆಂದು ಅಪ್ಪಣೆಕೊಟ್ಟಳು.

ಸರಿ! ಚಾಪೆ ತಂದು, ಅತ್ತೆಯನ್ನು ಕಟ್ಟಿ, ಅಡವಿಗೆ ಹೊತ್ತು, ಸೌದೆ ಯನ್ನೊಟ್ಟಿ, ಗಂಟನ್ನಿಟ್ಟು ಬೆಂಕಿ ಹಚ್ಚಿದ್ದಾಯಿತು. ಈ ಬಾರಿ ಸೊಸೆ ಬೆಂಕೀ ಪೆಟ್ಟಿಗೆಯನ್ನು ತೆಗೆದುಕೊಂಡು ಹೋಗಲು ಮರೆತಿರಲಿಲ್ಲ!

ಕೆಲವು ದಿನಗಳ ಮೇಲೆ, ಗಂಡ, 'ಏನೇ, ಅಮ್ಮ ಇನ್ನೂ ಬರಲಿಲ್ಲ ವಲ್ಲೆ!' ಎಂದು ಹೆಂಡತಿಯೊಡನೆ ಕೇಳಿದ. ಅದಕ್ಕವಳು: – 'ಅಯ್ಯೋ! ನಮ್ಮತ್ತೆ, ನಿಮ್ಮ ತಾಯಿ ಇನ್ನು ಬಂದಾರೇ? ಅವರ ಉಪ್ಪಿನಕಾಯಿ ಕೈ ಎಂದರೆ ಅದೆಂಥಾ ಮಹಾರಾಯ ಕೈ! ಯಮರಾಯ ಅವರ ಉಪ್ಪಿನ ಕಾಯಿಗೆ ಹುಚ್ಚಾಗಿ, ಅವರಿಗೆ ಬೇಕಾದ್ದು ಕೊಟ್ಟು ಉಪಚರಿಸಿ ಅಲ್ಲಿ ಇಟ್ಟುಕೊಂಡಿದ್ದರೂ ಇದ್ದಾನು. ನಮ್ಮ ಅತ್ತೆಯೂ ಆ ಸ್ವರ್ಗಸುಖದ ಮುಂದೆ ಇನ್ನೇಕೆ ಭೂಲೋಕ ಎಂದು ಅಲ್ಲಿಯೇ ಉಪ್ಪಿನಕಾಯಿ ಹಾಕುತ್ತಾ ಇದ್ದರೂ ಇದ್ದಾರು!' ಎಂದಳು.

